



ನಿಮ್ಮ ಭವಿಷ್ಯವನ್ನು ಕಾಪಾಡಲು ಜೀವ-ವಿಮೆಯೇ ಸುಭದ್ರವಾದ, ನಿಕರವಾದ ದಾರಿ. ಅದರ ಬಗ್ಗೆ ಕಂಡು ಹಿಡಿಯಿರಿ

# ರಾಜೂ ಬ್ರಶ್ ಇಲ್ಲದೇನೇ ಪೇಂಟ್ ಮಾಡುತ್ತಾನೆ

ರಾಜೂ ಬರೇ ಒಡ್ಡ ಹುಡುಗನಾಗಿದ್ದ. ಪೇಂಟ್ ಮಾಡುವುದೆಂದರೆ ಅವನಿಗೆ ಇಷ್ಟವಾಗುತ್ತಿತ್ತು, ನಿಜ, ಆದರೆ ಬಟ್ಟಲಿನ ನೀರನ್ನು ಅಲ್ಲಿಲ್ಲಿ ಚೆಲ್ಲುತ್ತಿದ್ದ. ನೆಲದ ಮೇಲೆ ಕಲೆ ಮಾಡುತ್ತಿದ್ದ, ತನ್ನ ಕೈಗಳನ್ನೂ ಬಟ್ಟೆಗಳನ್ನೂ ಹೊಲಸು ಮಾಡಿಕೊಳ್ಳುತ್ತಿದ್ದ.

ಇದನ್ನೆಲ್ಲ ಯಾವ ತಾಯಿ ತಾನೇ ಸಹಿಸಿಕೊಂಡಾಳು ? 'ಪೇಂಟಿಂಗ್ ಇನ್ನು ಮುಂದೆ ಬೇಡಪ್ಪಾ' ಎಂದು ಅವನ ಅಮ್ಮ ಹೇಳಿದಳು.

ಮೋಹನನಿಗೆ ರಾಜೂನ ಮೇಲೆ ತುಂಬ ಕನಿಕರ ಉಂಟಾಯಿತು. ಅವನು ರಾಜೂಗೆ ತನ್ನ ವ್ಯಾಕ್ಸ್ ಕ್ರೇಯನ್ ಮತ್ತು ಆಯಿಲ್ ಪ್ಯಾಸ್ಟೆಲ್‌ಗಳ ಪೆಟ್ಟಿಗೆಗಳನ್ನು ತೋರಿಸಿದನು. ನೀರು ಬೇಕಾಗಿಲ್ಲ, ಬ್ರಶ್ ಬೇಕಾಗಿಲ್ಲ, ಚೆಲ್ಲಿ ಹೋಗುವುದಿಲ್ಲ, ಕಲೆಗಳಾಗುವುದಿಲ್ಲ.

ಪೆಟ್ಟಿಗೆಯಿಂದ ಪ್ಯಾಸ್ಟೆಲ್‌ಗಳನ್ನು ತೆಗೆಯಿರಿ, ಚಿತ್ರ ಮಾಡಲು ಶುರು ಮಾಡಿರಿ. ಎಷ್ಟು ಸುಂದರವಾದ, ಎಷ್ಟು ತರಹಗಳ ಬಣ್ಣಗಳು!

ಗಿಳಿಯ ಹಸುರು ಬಣ್ಣ, ಲಾಬ್‌ಸ್ಟರ್ ಕಿತ್ತಳೆ ಬಣ್ಣ, ನವಿಲಿನ ನೀಲಿ ಬಣ್ಣ. ಸೂರ್ಯಕಾಂತಿ ಹೂವಿನ ಹಳದಿ ಬಣ್ಣ ಮತ್ತು ಇನ್ನೂ ಅನೇಕ ಬಣ್ಣಗಳು!

ಈಗ ರಾಜೂನ ಅಮ್ಮ ಕೂಡ ಕ್ರೇಯನ್‌ಗಳ ಒಂದು ಪೆಟ್ಟಿಗೆಯನ್ನು ಅವನಿಗೆ ತಂದು ಕೊಟ್ಟಿದ್ದಾಳೆ.



ಕ್ಯಾಮ್ಲಿನ್ ಪ್ರೈವೇಟ್ ಲಿಮಿಟೆಡ್,
ಆರ್ಟ್ ಮೆಟೀರಿಯಲ್
ಡಿವಿಜನ್,
ಜಿ. ಬಿ. ನಗರ್,
ಬೊಂಬಾಯಿ-400 059.



ಅನ್‌ಬ್ರೇಕೇಬಲ್ ಕ್ಯಾಮ್ಲಿನ್ ಪೆನ್ಸಿಲುಗಳ ತಯಾರಕರಿಂದ



## ಕ್ಯಾಮೆಲ್

ಆಯಿಲ್ ಪ್ಯಾಸ್ಟೆಲ್‌ಗಳು.

12, 24 ಮತ್ತು 48 ವರ್ಣಛಾಯೆಗಳಲ್ಲಿ ಕೂಡ ದೊರೆಯುತ್ತದೆ.




**Results of Chandamama—Camlin Colouring Contest No. 16 (Kannada)**

*1st Prize:* Rajagopala N. K., Koppa. *2nd Prize:* Chandrashekhar S. Songa, Ilkal. *3rd Prize* Allamprabhu D. Bakanetti, Rabkavi. *Consolation Prizes:* B. G. Rekha, Bangalore-21. Prathima H. G. Hassan 573 201; M. Naresha Prabhu, Ujiru 574 240; Manjunatha V. Hegde Bhairumbe A. Thimmappa. Hosahaw.

ಡಾಕ್ಟರ್, ನನ್ನ ಮಗೂಗೆ
ಮೈ ಚೆನ್ನಾಗಿಲ್ಲ, ತುಂಬಾ
ಸೊರಗಿದಾಳೆ. ಏನೂಂತ
ಸ್ವಲ್ಪ ನೋಡ್ತೀರಾ, ಪ್ಲೀಸ್?

ಜ್ವರ ಇಲ್ಲಕಣೋ, ಸ್ವಲ್ಪ
ಹೊಟ್ಟೆ ತೊಂದರೆ, ಅಷ್ಟೇ.
ವುಡ್‌ವರ್ಡ್ಸ್ ಗ್ರೈಪ್
ವಾಟರ್ ಕೊಟ್ಟುಬಿಟ್ರೆ
ಸಾಕು.

ಮಳೆ ಸುರೀತಾ ಇದೆ
ಯಲ್ಲ, ಡಾಕ್ಟರ್
ವುಡ್‌ವರ್ಡ್ಸ ಗ್ರೈಪ
ವಾಟರನ್ನ ಈಗ ನಾನು
ಅವಳಿಗೆ ಕೊಡಬೋದಾ!

ಕೊಡಬೋದಮ್ಮಾ, ಊಂ ಮಳೆ, ಬಿಸಿಲು
ಚಳಿ, ಯಾವಾಗ ಬೇಕಾದ್ರೂ. ಮಕ್ಕಳ
ಆರೋಗ್ಯಕ್ಕಾಗಿ ಇರೋದೇ ಈ
ವುಡ್‌ವರ್ಡ್ಸ್ ಗ್ರೈಪ್ ವಾಟರ್.






100 ವರ್ಷಗಳಿಗೂ ಹೆಚ್ಚು ಕಾಲ
ಮಾತೃಲೋಕದ ವಿಶ್ವಾಸಪಾತ್ರವಾದುದು

# ವುಡ್‌ವರ್ಡ್ಸ್ ಗ್ರೈಪ್ ವಾಟರ್

CAS OPPL 3/80 KN



# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

**ಬಾ**ವಿಯ ನೀರನ್ನು ಸೇದುತ್ತಾ ಇದ್ದರೆ ಒಸರು ಬರುತ್ತಾ ಇರುತ್ತದೆ. ಹಾಗೇ ಬಿಟ್ಟರೆ ಬತ್ತಿ ಹೋಗುತ್ತದೆ ಅಥವಾ ಹಾಳಾಗುತ್ತದೆ. ಅದರಂತೆಯೇ ಧನವೂ. ಧನವನ್ನು ಖರ್ಚು ಮಾಡುವುದಕ್ಕೆ ದಾನವೂ, ತಾನು ಅನುಭವಿಸುವುದೂ ಒಳ್ಳೆಯ ಮಾರ್ಗಗಳು. ದಾನಧರ್ಮಗಳ ಮೇಲೆ ಆಧಾರಪಟ್ಟುಕೊಂಡಿರುವ ಸಾಧು ಸನ್ಯಾಸಿಗಳಿಗೂ, ಬಡಬಗ್ಗರೆನಿಸುವ ಸಾಧಾರಣ ಜನರಿಗೂ ಇರುವ ವ್ಯತ್ಯಾಸವನ್ನು ತಿಳಿಯಲು, ಅಪಾತ್ರದಾನವು ಒಳ್ಳೆಯದಲ್ಲವೆಂಬುದನ್ನು ಅರಿಯಲು ಈ ಸಂಚಿಕೆಯಲ್ಲಿ ಒಂದು ಸಣ್ಣ ಕಥೆ ಇದೆ.





## ಅಮರವಾಣಿ

ಪ್ರಮಾಣಾದಧಿಕಸ್ಯಾಪಿ ಗಂಡಶ್ಯಾಮಮದಚ್ಯುತೇಃ
ಪದಂ ಮೂರ್ಧ್ನಿ ಸಮಾಧತ್ತೇ ಕೇಸರೀ ಮತ್ತದಂತಿನಃ

ಸ್ವರೂಪ ಬಲದಲ್ಲಿ ಹೆಚ್ಚಿನದಾದ ಆನೆಯ ಕುಂಭ ಸ್ಥಳವನ್ನು, ಚಿಕ್ಕದಾದರೂ ಸಾಹಸ ಪರಾಕ್ರಮಗಳಲ್ಲಿ ಹೆಚ್ಚಿನದಾದ ಸಿಂಹವು ಭೇದಿಸಬಲ್ಲುದು.

ಸಂಪುಟ : ೬೫ ಡಿಸೆಂಬರ್ '೮೦ ಸಂಚಿಕೆ : ೬

ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦





# ಪ್ರಶ್ನೋತ್ತರಗಳು

**ಎಂ. ವಾಸುದೇವಮೂರ್ತಿ, ಖಮ್ಮಂ, (ಆಂಧ್ರ)**

ಪ್ರ: ಒಂದು ವಾರಕ್ಕೆ ಏಳು ದಿನಗಳೆಂದು, ಆ ಒಂದೊಂದು ದಿನಗಳಿಗೆ, ಆದಿತ್ಯ, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿ ಎಂಬ ಹೆಸರುಗಳನ್ನು ವಾರದೊಂದಿಗೆ ಸೇರಿಸಿ ಹೇಳುತ್ತೇವಷ್ಟೆ ? ಈ ಏಳು ಹೆಸರುಗಳು ಹೇಗೆ ಬಂದುವು ?

ಉ; ಏಳು ದಿನಗಳ ವಾರವು ಸಹಜವಾದ ಕಾಲಮಾನವೇನಲ್ಲ. ಪ್ರಪಂಚದೊಳಗೆಲ್ಲಾ ಅಮಲಿನಲ್ಲಿರುವ ಈ ಏಳು ವಾರಗಳ ಹೆಸರುಗಳು ಒಂದು ನಾಗರಿಕತೆಯಿಂದಲೇ ಹುಟ್ಟಿರಬೇಕು. ಇದಕ್ಕೆ ಅನೇಕ ಕಾರಣಗಳನ್ನು ಊಹಿಸಬಹುದು. ನಮ್ಮ ಪೂರ್ವಿಕರಿಗೆ " ಏಳು " ಪವಿತ್ರ ಸಂಖ್ಯೆ, ಸಪ್ತರ್ಷಿಗಳು, ಸಪ್ತಹೋತಾರರು, ಸೂರ್ಯನ ಸಪ್ತಾಶ್ವಗಳು, ಸಪ್ತಮಾತೃಕೆಯರು, ಸಪ್ತಸಮುದ್ರಗಳು, ಏಳೇಳು ಲೋಕಗಳು ಇತ್ಯಾದಿ.

ಎರಡನೆಯದಾಗಿ, ಪ್ರಾಚೀನ ಖಗೋಳ ಶಾಸ್ತ್ರಜ್ಞರು ಏಳು ಗ್ರಹಗಳನ್ನು ಗುರುತಿಸಿ, ರವಿ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿಗಳೆಂದರು. ಆ ಹೆಸರನ್ನೇ ದಿನಗಳಿಗೂ ಇಟ್ಟಿರಬೇಕು.

ಈ ಕಾಲದಲ್ಲಿ ನಾವು ರವಿಯನ್ನು ಗ್ರಹಕಕ್ಷೆಗೆ ಕೇಂದ್ರವಾಗಿಯೂ, ಚಂದ್ರನನ್ನು ಉಪಗ್ರಹವಾಗಿಯೂ ಭಾವಿಸುತ್ತೇವೆ, ಆದರೂ ವಾರಗಳ ಹೆಸರು ಬದಲಾಗಿಲ್ಲ. ವಾರವೆಂಬುದರ ನಿಜವಾದ ಅರ್ಥ ದಿನ. ನಾವು ಏಳು ದಿನಗಳನ್ನು ಲೋಕ ವ್ಯವಹಾರ ನಡೆಸಲು ಸೌಕರ್ಯವಾಗುವಂತೆ ಒಂದು ವಾರ ಅನ್ನುತ್ತೇವೆ.

**ಶ್ರೀನಂದಾ, ಬೆಂಗಳೂರು, (ಕರ್ನಾಟಕ)**

ಪ್ರ: ಆಕಾಶಗಂಗೆ, ಕ್ಷೀರಪಥ ಅಂದರೆ ಏನದು ?

ಉ: ಆಕಾಶದಲ್ಲಿ ನಕ್ಷತ್ರಗಳು ಗುಂಪು ಗುಂಪಾಗಿರುತ್ತವೆ. ನಾವು ಒಂದು ಸೂರ್ಯ ಕುಟುಂಬದ ಗ್ರಹದಲ್ಲಿರುವವರು. ಇಂತಹ ಸೂರ್ಯನಂತಹ ನಕ್ಷತ್ರಗಳು ಕೆಲವು ಸಾವಿರಕೋಟಿಗಳಷ್ಟು ಒಂದು ಬ್ರಹ್ಮಾಂಡವಾಗಿದೆ. ಶುಭ್ರಾಕಾಶದ ರಾತ್ರಿಯಲ್ಲಿ ಅದು ಪ್ರಕಾಶವಾಗಿ ನಮಗೆ ಕಾಣುತ್ತದೆ. ನಮ್ಮ ಸೂರ್ಯನು ಆ ನಕ್ಷತ್ರ ಪುಂಜಗಳ ಕೇಂದ್ರಕ್ಕೆ ದೂರದಲ್ಲಿದ್ದಾನೆ. ನಾವು ಆ ಕೇಂದ್ರದ ಕಡೆಗೆ ನೋಡಿದಾಗ ಹೆಚ್ಚು ನಕ್ಷತ್ರಗಳು ಕೇಂದ್ರೀಕರಿಸಿ ಪ್ರಕಾಶವಾಗಿ ಕಾಣುವ ಭಾಗವನ್ನು ಆಕಾಶಗಂಗೆ ಎಂದೂ ಕ್ಷೀರಪಥವೆಂದೂ ಹೇಳುತ್ತೇವೆ.

**ಎಂ. ಸುಕುಮಾರ್ ಜೈನ್, ಶಿವಮೊಗ್ಗ, (ಕರ್ನಾಟಕ)**

ಪ್ರ: ಚಂದ್ರನು ನಮಗೆ ಗೋಳಾಕಾರವಾಗಿ, ಪ್ರಕಾಶಬೀರುವಂತೆ, ಚಂದ್ರಗೋಳದಿಂದ ನೋಡಿದರೆ ಭೂಮಿಯೂ ಕಾಣಿಸುತ್ತದೆಯೇ ?

ಉ: ಕಾಣಿಸುತ್ತದೆ. ಚಂದ್ರನದಿಕ್ಕಿನಿಂದ ಭೂಮಿಯನ್ನು ಬಣ್ಣದ ಫೋಟೋ ಸಹಾ ಹಿಡಿದಿದ್ದಾರೆ. ಚಂದ್ರ ಗೋಳಕ್ಕಿಂತ ಭೂಮಿ ಬಹಳ ದೊಡ್ಡದಾದುದರಿಂದ ಚಂದ್ರನ ಮೇಲಿಂದ ಭೂಮಿಯನ್ನು ನೋಡಿದರೆ ಬಹಳ ದೊಡ್ಡದಾಗಿ ಕಾಣುತ್ತದೆ. ನಮಗೆ ಅಮಾವಾಸ್ಯೆಯ ದಿನ ಚಂದ್ರನಲ್ಲಿ ಹುಣ್ಣಿಮೆ. ಅಂದರೆ ಅಂದು ಭೂಮಿ ಪೂರ್ಣ ಬಿಂಬವಾಗಿ ಅತ್ಯಂತ ಶಾಂತಿಯುತವಾಗಿ ಚಂದ್ರನ ಮೇಲಿದ್ದವರಿಗೆ ಕಾಣುತ್ತದೆ.



೮೯

ಮೇಘವರ್ಣ ಕಾಗೆಯೂ ಇತರ ಕಾಗೆಗಳೂ ಭೀಕರವಾಗಿ ಮಾಡಿದ ಕಾಕಾಕಾರವದ ಕಿರಿಚಾಟವನ್ನೂ, ಬೆಂಕಿಯನ್ನೂ ಹೊಗೆಯನ್ನೂ ನೋಡಿ ನೀರು ಹಕ್ಕಿಗಳೆಲ್ಲಾ ಹೆದರಿ ಕೋಟೆಯನ್ನು ಬಿಟ್ಟು ಹಾರಿ ಹೋಗಿ ಅಗಳ್ತೆಯೊಳಗೆ ಸೇರಿ ರಕ್ಷಣ್ಯ ಪಡೆದುವು.

ಚಿತ್ರವರ್ಣನ ಸೇನಾಪತಿಯಾದ ಕೋಳಿ ಹುಂಜವು ಹಿರಣ್ಯ ಗರ್ಭನನ್ನೂ ಅವನ ಸೇನಾಪತಿ ಸಾರಸನನ್ನೂ ಸುತ್ತಲೂ ಮುತ್ತಿ ಹಿಂಸಿಸ ತೊಡಗಿತು. ಅದನ್ನು ತಾಳಿಕೊಂಡು ಸಾರಸನು ತನ್ನ ರಾಜನನ್ನು ರಕ್ಷಿಸಲು ಪೇಚಾಡುವುದನ್ನು ನೋಡಿ ಹಿರಣ್ಯ ಗರ್ಭರಾಜನು, "ನನ್ನ ವಿಷಯ ನನಗೇ ಬಿಟ್ಟು, ನನ್ನ ಮಗ ಚೂಡಾಮಣಿಗೆ ರಾಜ್ಯಾಭಿಷೇಕ ಮಾಡಿಸು " ಎಂದನು.

"ನನ್ನ ದೇಹದಲ್ಲಿ ಜೀವವಿರುವವರೆಗೆ ಶತ್ರುಗಳು ನಿಮ್ಮನ್ನು ಮುಟ್ಟಲು ಬಿಡಲಾರೆ " ಎಂದು ಸಾರಸನು ಹುಂಜನ ಪ್ರಯತ್ನವನ್ನು ವಿಫಲಗೊಳಿಸಿ ಹಿರಣ್ಯ ಗರ್ಭನನ್ನು ಸುರಕ್ಷಿತವಾದ ಅಗಳ್ತೆಯೊಳಗೆ ತಳ್ಳಿಬಿಟ್ಟಿತು. ತರುವಾಯ ಸಾರಸವು ಕೋಳಿ ಹುಂಜದೊಂದಿಗೆ ಹೋರಾಹೋರಿ ನಡೆಸಿ ಹುಂಜವನ್ನು ಕೊಂದಿತು. ಆದರೆ ನೆಲದ ಪಕ್ಷಿಗಳು ಒಮ್ಮೆಗೇ ಒಗ್ಗಟ್ಟಾಗಿ ಕೂಡಿ ಸಾರಸನ ಮೇಲೆಬಿದ್ದು ಅದನ್ನು ಕೊಂದು ಹಾಕಿದುವು. ಯುದ್ಧವು ಚಿತ್ರವರ್ಣನ ವಿಜಯದಲ್ಲಿ ಮುಗಿಯಿತು.

**ಶಾಂತಿ**

ಸೋಲನ್ನು ಅನುಭವಿಸಿದ ಹಿರಣ್ಯ ಗರ್ಭನು ತನ್ನ ಅನುಚರರನ್ನು ನೋಡಿ, "ನಮ್ಮ ಕೋಟೆಯೊಳಗಿನ ಮನೆಗಳ ಮೇಲೆ ಉರಿಯುವ ಕೊಳ್ಳಿಗಳನ್ನು ಹಾಕಿದವರು ಯಾರು ? ಶತ್ರುಗಳೋ, ಅಥವಾ ಶತ್ರುಗಳು ನಿಯೋಗಿಸಿದ ಕೋಟೆಯೊಳಗೇ ಇದ್ದ ಗುಟ್ಟಿನವರೋ ?" ಎಂದು ಪ್ರಶ್ನಿಸಿತು.

"ನಿಮ್ಮ ಅವ್ಯಾಜ ಮಿತ್ರನಾದ ಆ ಮೇಘವರ್ಣನೂ, ಅವನ ಅನುಚರರೂ ಇಲ್ಲಿ ಕಾಣುವುದಿಲ್ಲ. ಆ ಕೆಲಸ ಮಾಡಿದವರು ಅವರೇ ಎಂದು ತೋರುತ್ತದೆ. ನಮ್ಮ ಆಕಸ್ಮಿಕ ಸೋಲಿಗೆ ಅದುವೇ ಕಾರಣ" ಎಂದನು ಸರ್ವಜ್ಞ ಮಂತ್ರಿ.

"ಎಲ್ಲವೂ ನಮ್ಮ ದುರದೃಷ್ಟ! ನಮ್ಮ ಪ್ರಾರಬ್ಧ !" ಎಂದು ಹಂಸರಾಜ ಹಳಹಳಿಸಿದ.

" ಸುಮ್ಮನೆ ದುರದೃಷ್ಟವನ್ನು ನಿಂದಿಸಿದರಾಯಿತೆ? ಸರಿ[illegible]ದವನು ಹೇಳುವ ಹಿತವಚನಗಳನ್ನು ಕೇಳ [illegible]ವನು ಕಷ್ಟಗಳಿಗೆ ಬೀಳುವನು " ಎಂದನು ಸರ್ವಜ್ಞ.

ಇದನ್ನೆಲ್ಲ ತಿಳಿದು ಹಿರಣ್ಯ ಗರ್ಭನ ಮಂತ್ರಿ ತಮ್ಮ ಹೊಸ ಸೇನಾಧಿಪತಿಯಾದ ಸಾರಸನ ಮಗನನ್ನು ಜಂಬೂದ್ವೀಪಕ್ಕೆ ಕಳುಹಿಸಿ, ಅಲ್ಲಿ ಅರಾಜಕವನ್ನುಂಟು ಮಾಡಲು ಹೇಳಿದನು. ಆಮೇಲೆ ಸಿಂಹಳ ದ್ವೀಪವನ್ನು ಜಂಬೂದ್ವೀಪದ ಮೇಲೆ ಯುದ್ಧಕ್ಕೆ ಹೊರಡುವಂತೆ ಹುರಿಗೊಳಿಸಬೇಕೆಂದೂ ತಿಳಿಸಿದನು.

ಅಷ್ಟರಲ್ಲಿ ದೂತನ ಮೂಲಕ ಒಂದು ಸಮಾಚಾರವು ಬಂದಿತು. ಅದೇನಂದರೆ ಕರ್ಪೂರ ದ್ವೀಪವು ಸೋತು ಹೋಗಲು ಸಹಾಯಮಾಡಿದ ಮೇಘವರ್ಣ ಕಾಗೆಯನ್ನು ರಾಜನನ್ನಾಗಿ ಮಾಡುವೆನೆಂದು ಚಿತ್ರವರ್ಣನು ಹೇಳಿದುದಕ್ಕೆ ಮಂತ್ರಿ ದೂರದರ್ಶನನು ಒಪ್ಪದೆ, ಆ ನೀಚನನ್ನು ದೊಡ್ಡ ಹೊಣೆಯುಳ್ಳ ಪದವಿಯಲ್ಲಿ ಇರಿಸಬಾರದೆಂದೂ, ಆ ಕಾಗೆಗೆ ಬೇಕಾದಷ್ಟು ಬಂಗಾರ ಮೊದಲಾದ ಬಹುಮಾನಗಳನ್ನು ಕೊಟ್ಟರೆ ಸಾಕೆಂದೂ ಹೇಳಿದನಂತೆ. ಅದಕ್ಕೆ ಚಿತ್ರವರ್ಣನು, ಕಾಗೆಯನ್ನು ಕರ್ಪೂರ ದ್ವೀಪದ ರಾಜನಾಗಿ ಮಾಡಿದರೆ ಅದು ತನಗೆ ದಿನಾ ಕಾಶ್ಮೀರ ಶಾಲುವೆಗಳನ್ನೂ, ಕುಂಕುಮ ಹುವ್ವು ಮತ್ತು ಫಲಗಳನ್ನೂ ಕಳುಹಿಸುವುದಿಲ್ಲವೇ ? ಎಂದುದನ್ನು ಕೇಳಿ ಅಂತಹ ದುರಾಶೆಗೆ ಹೋಗಬಾರದೆಂದು ಮಂತ್ರಿ ಎಚ್ಚರಿಸಿದನಂತೆ.

ಹಾಗಾದರೆ ಏನು ಮಾಡಬೇಕೆಂದು ಚಿತ್ರವರ್ಣ ನವಿಲು ಹದ್ದು ಮಂತ್ರಿಯನ್ನು ತಿರುಗಿ ಕೇಳಿದ್ದಕ್ಕೆ, " ಹಂಸರಾಜನೊಂದಿಗೆ ಶಾಂತಿಯ ಒಡಂಬಡಿಕೆ ಮಾಡಿಕೊಂಡು ವಿಂಧ್ಯಾದ್ರಿಗೆ ಹಿಂದಿರುಗಿ ಬಿಡಬೇಕು. ಮಳೆಗಾಲ ಪ್ರಾರಂಭವಾಗುವ ವರೆಗೂ ಇಲ್ಲೇ ಇದ್ದು ಆಲಸ್ಯ ಮಾಡಿದರೆ, ಮತ್ತೊಂದು ಯುದ್ಧವು ನಡೆದು ಬಹಳ ನಷ್ಟದ ಪಾಲಾಗುತ್ತೇವೆ, ಕೋಟೆಯನ್ನು ಜಯಿಸಿದೆವೆಂಬ ಕೀರ್ತಿಯೊಂದು ಈಗ ಬಂದಿದೆಯಷ್ಟೆ ? ಅದನ್ನೇಕೆ ಹೋಗಲಾಡಿಸಿಕೊಳ್ಳಬೇಕು ? ನಿಜ ನೋಡಿದರೆ ನಮ್ಮದು ಮೋಸದಿಂದಾದ ವಿಜಯ.



ಎರಡೂ ಪಕ್ಷಗಳು ಸಮಬಲವಾಗಿರುವಾಗ, ಒಂದೊಂದು ಸಾರಿ ಎರಡು ಪಕ್ಷಗಳಿಗೂ ನಾಶನ ಬರುವ ಸಾಧ್ಯತೆಯೂ ಉಂಟು. ಆದುದರಿಂದ ನಮಗಿಂತ ಕಡಿಮೆಯುವನಲ್ಲದ ಹಂಸರಾಜ ಹಿರಣ್ಯ ಗರ್ಭನೊಂದಿಗೆ ಸಂಧಿ ಮಾಡಿಕೊಳ್ಳೋಣ" ಎಂದನು ಹದ್ದು ಮಂತ್ರಿ.

ವಿಜಯ ಗರ್ವದಲ್ಲಿರುವ ಚಿತ್ರವರ್ಣನಿಗೆ ಸೋತು ಹೋದ ಶತ್ರುವಿನೊಂದಿಗೆ ಸಂಧಿಯನ್ನೋ ಶಾಶ್ವತ ಸಖ್ಯವನ್ನೋ ಮಾಡಿಕೊಳ್ಳುವ ಯೋಚನೆ ಮೊದಲು ಹಿಡಿಸಲಿಲ್ಲ. ಹದ್ದು ಮಂತ್ರಿ ನವಿಲು ರಾಜನೊಂದಿಗೆ ಈ ವಿಷಯದಲ್ಲಿ ಮೇಘವರ್ಣ ಕಾಗೆಯ ಆಲೋಚನೆ ಹೇಗೆಂದು ಕೇಳಲು ಹೇಳಿದನು. ಕಾಗೆ ಚಿತ್ರವರ್ಣನೊಂದಿಗೆ, "ಸಂಧಿ ಮಾಡಿಕೊಳ್ಳುವುದೇ ಒಳ್ಳೆಯದು. ಹಂಸರಾಜನೂ ಅವನ ಮಂತ್ರಿಯೂ ದೊಡ್ಡ ಬುದ್ಧಿಯುಳ್ಳವರು" ಎಂದು ಹೇಳಿತು.

"ಹಾಗಾದರೆ ನೀನು ಆ ರಾಜನನ್ನೂ ಮಂತ್ರಿಯನ್ನೂ ಮೋಸಪಡಿಸಿ ಸೋಲುಣ್ಣುವಂತೆಮಾಡಲು ಹೇಗೆ ಸಾಧ್ಯವಾಯಿತು?" ಎಂದು ನವಿಲು ರಾಜನು ಕಾಗೆಯನ್ನು ಕೇಳಿದನು.

"ಪ್ರಭೂ, ನಿನ್ನ ಮೇಲೆ ವಿಶ್ವಾಸವಿಟ್ಟ ಮಹಾತ್ಮರನ್ನು ಮೋಸಪಡಿಸುವುದರಲ್ಲಿ ಘನತೆ ಏನಿದೆ? ಅದು ನಿನ್ನ ಮಡಿಲಲ್ಲಿ ಮಲಗಿದವನನ್ನು ಕೊಂದ ಹಾಗೆಯೇ ಸರಿ. ಸಜ್ಜನನು ದುಷ್ಟನನ್ನು ತನ್ನಂಥವನೇ ಎಂದು ಭಾವಿಸಿ ನಂಬಿದಾಗ ಮೋಸಪಡಿಸುವುದು ಸುಲಭ. ಅಷ್ಟು ಮಾತ್ರಕ್ಕೆ ನಾನೀಗ ಹೇಳಿದ ಸಲಹೆ ಒಳ್ಳೆಯದಲ್ಲವೆನ್ನಲು ಸಾಧ್ಯವಿಲ್ಲ" ಎಂದಿತು ಕಾಗೆ.

"ಮೇಘವರ್ಣಾ, ನೀನು ಅಷ್ಟು ದಿನಗಳವರೆಗೆ ಅವರಿಗೆ ವಿಧೇಯತೆಯನ್ನು ತೋರಿಸಿಕೊಂಡು ಹೇಗೆ ಇರಲು ಸಾಧ್ಯವಾಯಿತು?" ಎಂದು ನವಿಲು ರಾಜ ಪುನಃ ಪ್ರಶ್ನೆ ಮಾಡಿದನು.

"ನನ್ನ ಕೆಲಸ ಪೂರ್ತಿಗೊಳಿಸಲು ಹಾಗಿರಲೇಬೇಕಾಯಿತು. ಅದಿರಲಿ, ಈಗ ನನ್ನ ಸಲಹೆಯಂತೆ ಹಿರಣ್ಯಗರ್ಭನೊಂದಿಗೆ ಸಂಧಿ ಮಾಡಿಕೊಳ್ಳಿರಿ" ಎಂದಿತು ಕಾಗೆ. ಮಂತ್ರಿ ಇದಕ್ಕೆ ಒಪ್ಪಿದನು.



"ನಮಗೆ ಸೋತುಹೋದ ಹಂಸರಾಜನು ಕಡೇ ಪಕ್ಷ ನಮಗೆ ಕಪ್ಪ ಕೊಡುತ್ತ ನನ್ನ ಆಜ್ಞೆಗೆ ಒಳಪಟ್ಟು ಇರಬೇಕು" ಎಂದನು ನವಿಲು ರಾಜ.

ಅಷ್ಟರಲ್ಲಿ ಕರ್ಪೂರ ದ್ವೀಪದಿಂದ ಬಂದ ಗಿಳಿ ನವಿಲು ರಾಜನೊಂದಿಗೆ, "ಸಿಂಹಳ ದ್ವೀಪದ ಸೇನಾನಿ ಕೊಕ್ಕರೆ ಜಂಬೂ ದ್ವೀಪದ ಮೇಲೆ ದಾಳಿ ಮಾಡಲು ಹೊರಟಿದೆ" ಎಂದು ಹೇಳಿತು.

"ಒಳ್ಳೇ ಕೆಲಸ ಮಾಡಿಸಿದ್ದಾನೆ ಸರ್ವಜ್ಞ!" ಎಂದು ಉತ್ಸಾಹದಿಂದ ಹದ್ದು ಮಂತ್ರಿ ಉದ್ಗಾರ ತೆಗೆದನು.

"ನಾನು ಕೂಡಲೇ ಹೋಗಿ ಆ ಕೊಕ್ಕರೆಯ ಸಮಾಚಾರ ನಡುದಾರಿಯಲ್ಲೇ ತೆಗೆದುಕೊಳ್ಳುತ್ತೇನೆ" ಎಂದು ನವಿಲು ರಾಜ ರೆಕ್ಕೆಯಾಡಿಸಿದನು.

"ಪ್ರಭೂ! ಸಿಟ್ಟಿಗೆದ್ದು ಲಾಭವಿಲ್ಲ. ಸರಿಯಾಗಿ ಆಲೋಚನೆ ಮಾಡದೆ ದುಡುಕುವ ಕೆಲಸಗಳಿಂದ ಆಪತ್ತೇ ಬರುತ್ತದೆ" ಎಂದು ದೂರದರ್ಶನ ಹದ್ದು ಮಂತ್ರಿ ಹೇಳಿದ.

ನವಿಲು ರಾಜನಿಗೆ ಈಗ ಮಂತ್ರಿಯ ಮಾತು ನಿಜವೆಂದು ತೋರಿತು. ತನ್ನ ಮಂತ್ರಿಯೊಂದಿಗೆ ಶಾಂತಿಯ ಸಂಧಿಯನ್ನು ಏರ್ಪಡಿಸುವಂತೆ ಹೇಳಿದನು. ದೂರದರ್ಶನನು ಹಿರಣ್ಯಗರ್ಭ ಹಂಸರಾಜನ ಬಳಿಗೆ ಶಾಂತಿಯ ರಾಯಭಾರಿಯಾಗಿ ಹೋದನು.

ಹದ್ದುಮಂತ್ರಿ ಹೇಳಿದ ಒಪ್ಪಂದದ ವಿಷಯವನ್ನು ಕೇಳಿ ಹಿರಣ್ಯಗರ್ಭನು ತನ್ನ ಮಂತ್ರಿಯೊಂದಿಗೆ, "ಇದು ಇನ್ನೊಂದು ಮೋಸದ ಎತ್ತುಗಡೆಯೋ ಏನೋ?" ಎಂದು ಸಂದೇಹದಿಂದ ಕೇಳಿದನು.

"ಅಲ್ಲ; ದೂರದರ್ಶನನು ದೊಡ್ಡ ಬುದ್ಧಿಯುವನು. ನಾವು ಅವನನ್ನು ಕಾಣಿಕೆಗಳೊಂದಿಗೆ ಗೌರವಿಸಬೇಕು" ಎಂದನು ಸರ್ವಜ್ಞ ಮಂತ್ರಿ.

ಹದ್ದು ಮಂತ್ರಿ ಸರ್ವಜ್ಞನೊಂದಿಗೆ ಶಾಂತಿಯ ಒಪ್ಪಂದವನ್ನು ಕುರಿತು ಹೇಳಿ, "ಇದಕ್ಕೆ ಉಭಯರೂ ಒಪ್ಪಿಕೊಂಡು ಉಭಯ ರಾಜರ ನಡುವೆ ಶಾಂತಿಯನ್ನು ನೆಲೆಗೊಳಿಸೋಣ. ಸಾವಿರ ಅಶ್ವಮೇಧಗಳಿಗಿಂತ ಸತ್ಯದ ಮೇಲೆ ಆಧಾರವಾಗಿರುವ ಶಾಂತಿಯೇ ಮೇಲಾದುದು" ಎಂದನು.

ಸರ್ವಜ್ಞ ಮಂತ್ರಿ ಇದಕ್ಕೆ ಸಂತೋಷವಾಗಿ ಒಪ್ಪಿದನು. ಉಭಯ ಪಕ್ಷಗಳ ಮಧ್ಯೆ ಶಾಂತಿಯ ಸಂಧಿಯಾಯಿತು. ಕೊಕ್ಕರೆ ಸೇನಾನಿಯನ್ನು ಹಿಂದಕ್ಕೆ ಕರೆಸಿಕೊಳ್ಳಲಾಯಿತು. ಆಮೇಲೆ ಯಾವ ತೊಂದರೆಗಳೂ ಇಲ್ಲದೆ, ಚಿತ್ರವರ್ಣನು ಜಂಬೂದ್ವೀಪದಲ್ಲಿಯೂ, ಹಿರಣ್ಯಗರ್ಭನು ಕರ್ಪೂರ ದ್ವೀಪದಲ್ಲಿಯೂ, ಮೇಘವರ್ಣ ಕಾಗೆ ಸಿಂಹಳ ದ್ವೀಪದಲ್ಲಿಯೂ ತಮ್ಮ ಪಾಡಿಗೆ ಶಾಂತಿ ಸಮಾಧಾನಗಳಿಂದ ರಾಜ್ಯ ಪಾಲನೆ ಮಾಡಿಕೊಂಡಿದ್ದುವು. (ಮುಗಿಯಿತು)






## ೭

[ಪೂರ್ವ ತೀರದಲ್ಲಿರುವ ತಮ್ಮ ಹಡಗುಗಳನ್ನು ತಲಪಬೇಕೆಂದು ಹೊರಟ ಸಮರಸೇನಾದಿಗಳು, ಸ್ಫೋಟಿಸಿದ ಜ್ವಾಲಾಮುಖಿಯ ಕಾರಣದಿಂದ ಮತ್ತಾವ ದಿಕ್ಕಿಗೋ ಹೋಗ ತೊಡಗಿದರು. ಆ ದಾರಿಯಲ್ಲಿ ಮರದ ಕೊಂಬೆಗೆ ತಲೆ ಕೆಳಗಾಗಿ ನೇತು ಹಾಕಲ್ಪಟ್ಟ ಒಬ್ಬ ಮನುಷ್ಯನನ್ನು ನೋಡಿದರು. ಅಲ್ಲಿ ಮಾನವರು ನಡೆದ ಗುರುತನ್ನು ಅನುಸರಿಸಿ ಹೋಗಲು, ಆನೆಗಳ ಮಂದೆಯಿಂದ ಆ ಗುರುತು ಕೂಡಾ ಮಾಯವಾದುವು.]

ಸುಮ್ಮನೆ ನಿಂತರೆ ಪ್ರಯೋಜನವೇನಿಲ್ಲವೆಂದು ಕೊಂಡು ಸಮರಸೇನನು ಸೈನಿಕರಿಗೆ ಧೈರ್ಯ ಹೇಳಿ ಈ ಮೊದಲು ನೋಡಿದ ಕಲ್ಲುಗಳ ದಿಣ್ಣೆಯ ಕಡೆಗೆ ನಡೆಯ ತೊಡಗಿದನು. ಎತ್ತರವಾದ ಆ ದಿಣ್ಣೆಯ ಮೇಲೆ ಹತ್ತಿ ನೋಡಿದರೆ ಸಮೀಪದಲ್ಲಿ ಎಲ್ಲಿ ಯಾದರೂ ಕಾಡು ಜಾತಿಯವರ ಹಟ್ಟಿಗಳೋ ಕೊಟ್ಟಿಗೆಗಳೋ, ಕೊಂಪೆ ಮನೆಗಳೋ ಕಣ್ಣಿಗೆ ಬೀಳ ಬಹುದೆಂದು ಅವನ ಆಶೆ. ಆದರೆ ಅವನು ಅದರ ಮೇಲೆ ಏರಿ ಕಣ್ಣಿಗೆ ಕಣ್ಣಿಟ್ಟು ನೋಡಿದರೂ ಎಲ್ಲಿಯೂ ಮಾನವ ನಿವಾಸಗಳ ಕುರುಹೇ ಕಾಣಲಿಲ್ಲ.

ಹಾಗಾದರೆ ಯಾವ ಕಡೆಯನ್ನು ಹಿಡಿದು ಹೋಗ ಬೇಕು ? ಏನು ಮಾಡಬೇಕು ? ಸಮರಸೇನ ಮತ್ತು ಸೈನಿಕರ ತಲೆಗಳಲ್ಲಿ ಈ ಪ್ರಶ್ನೆ ಸುಮ್ಮನೆ ತಿರುಗು ತ್ತಿದ್ದುವು. ಸಮರಸೇನನು ದಿಣ್ಣೆಯ ಮೇಲಿಂದ ಕೆಳಗೆ ಬಂದು ಒಂದು ಮರದ ಕಾಂಡಕ್ಕೆ ಒರಗಿ ಮುಂದಿನ ಹೆಜ್ಜೆಗಳನ್ನು ಕುರಿತು ಆಲೋಚಿಸು ತ್ತಿದ್ದನು. ನಾಲ್ಕು ಸುತ್ತಲೂ ಒಂದೇ ಶೂನ್ಯವೇ ಅವನ ತಲೆಯನ್ನು ಕೊರೆಯುತ್ತಿದ್ದಿತು.

ಅಂತಹ ಸ್ಥಿತಿಯಲ್ಲಿ ಇದ್ದಕ್ಕಿದ್ದ ಹಾಗೆ ಅವರ ಕಿವಿ ಗಳಿಗೆ ಒಂದು ಆರ್ತನಾದವು ಬಡಿಯಿತು. ಆ ಕಂಠ



ಸ್ವರ ಏಕಾಕ್ಷಿ ಮಾಂತ್ರಿಕನದೂ ಅಲ್ಲ, ಚತುರ್ನೇತ್ರ ಮಾಂತ್ರಿಕನದೂ ಅಲ್ಲ. ಘೋರವಾದ ವಿಪತ್ತಿನಲ್ಲಿ ಸಿಕ್ಕಿಕೊಂಡ ಒಬ್ಬ ಸಾಮಾನ್ಯ ಮಾನವನ ಆರ್ತನಾದ ವಾಗಿತ್ತು ಅದು.

ಸೈನಿಕರು ಬೆರಗಾಗಿ ಬಾಯಿ ತೆರೆದು ತಮ್ಮ ಒಡೆಯನ ಮುಖವನ್ನು ನೋಡಿದರು. ಸಮರ ಸೇನನು ಸರ್ರನೆ ಒರೆಯೊಳಗಿನ ಕತ್ತಿಯನ್ನು ಸೆಳೆದೆತ್ತಿ ದನು. "ಬನ್ನಿ ! ಜಾಗ್ರತೆ !" ಎಂದು ಸೈನಿಕರಿಗೆ ಹೇಳಿ ಸಮರಸೇನನು ಆರ್ತನಾದವು ಹೊರಟ ದಿಕ್ಕಿಗೆ ಓಡಿದನು. ಅವನ ಹಿಂದೆಯೇ ಸೈನಿಕರೂ ಬಿಚ್ಚು ಗತ್ತಿಗಳೊಂದಿಗೆ ಓಡಿದರು.

ಮುಂದೆ ಮುಂದೆ ಹೋದಂತೆ ಮಾನವ ಕಂಠದ ಆರ್ತಾಲಾಪಗಳು ಇನ್ನಷ್ಟು ಸ್ಪಷ್ಟವಾಗಿ ಕೇಳ ತೊಡಗಿತು ; "...ಅಯ್ಯಯ್ಯೋ !...ಎಂಥಾ ಸಾವು ಬಂತಲ್ಲಾ !...ರಕ್ಷಿಸುವವರಿಲ್ಲವೇ !...ಕೆಟ್ಟ ಸಾವು ಸಾಯ್ತೇನಪ್ಪೋ !..." ಆದರೆ ಅಲ್ಲಿನ ದೃಶ್ಯವು ಕಣ್ಣಿಗೆ ಬಿದ್ದ ಕೂಡಲೇ ಸಮರಸೇನಾದಿಗಳು ಗಕ್ಕನೆ ನಿಲ್ಲಲೇಬೇಕಾಯಿತು. ಅವರೆಲ್ಲರನ್ನೂ ಭಯಕಂಪಿತ ಗೊಳಿಸುವ ಘೋರ ದೃಶ್ಯವು ಅವರ ಮುಂದಿತ್ತು. ಅದರೆಡೆಯಲ್ಲಿ ಸಮರಸೇನನಿಗೊಂದು ಆಶಾತಂತು ವಿರುವುದೂ ಕಂಡಿತು. ಆ ಆರ್ತಮನುಷ್ಯನನ್ನು ನೋಡಿ ಸೈನಿಕರಿಗೂ ಒಂದು ಉತ್ಸಾಹವೆದ್ದಿತು. ಈ ಭಯಂಕರ ಮಾಂತ್ರಿಕರ ದ್ವೀಪದಲ್ಲಿ, ಮೊತ್ತಮೊದ ಲನೇ ಬಾರಿಯಾಗಿ ಜೀವದಿಂದಿರುವ ತಮ್ಮಂತಹ ಒಬ್ಬ ಮನುಷ್ಯನನ್ನು ಅವರೀಗ ನೋಡುತ್ತಿದ್ದಾರೆ. ಆ ಮನುಷ್ಯ ಸಿಕ್ಕಿಕೊಂಡಿರುವ ಆಪತ್ತು ಸಾಮಾನ್ಯ ವಾದುದಲ್ಲ.

ಯಾರೋ ಅವನ ತೋಳುಗಳನ್ನು ಹಿಂದಕ್ಕೆ ಬಿಗಿದು ಮರಕ್ಕೆ ಕಟ್ಟಿಹೋಗಿದ್ದಾರೆ. ನಿಸ್ಸಹಾಯ ನಾಗಿರುವ ಅವನನ್ನು ತಿಂದುಹಾಕಲು ನಾಲ್ಕೈದು ತೋಳಗಳು ಬಂದಿವೆ. ಅದೇ ಸಮಯದಲ್ಲಿ ಹಸಿದ ಹೆಬ್ಬುಲಿಯೊಂದು ಕೂಡಾ ಬಂದಿತ್ತು. ಈಗ ಆ ನಿರ್ಭಾಗ್ಯದವನ ಮಾಂಸಕ್ಕಾಗಿ ಆ ತೋಳಗಳೊಳಗೂ, ಹೆಬ್ಬುಲಿಯ ನಡುವೆಯೂ ಹೋರಾಟ ನಡೆಯು ತ್ತಿತ್ತು. ಇಂತಿದ್ದರೂ ಧೈರ್ಯಶಾಲಿಯಾದ ಅವನು ಇನ್ನೂ ಬದುಕಿದ್ದಾನೆ ! ಭಯಭೀತನಾದ ಆ ಮನುಷ್ಯ ಕೂಗುತ್ತಿದ್ದಾನೆ ಪಾಪ !

ಸಮರಸೇನನು ನಿಮಿಷದೊಳಗೆ ಅಲ್ಲಿಯ ಪರಿ ಸ್ಥಿತಿಯನ್ನು ಅವಗಾಹನೆ ಮಾಡಿಕೊಂಡನು. ಹೆಬ್ಬು ಲಿಯ ಪಂಜಾದ ಏಟುಗಳಿಂದ ಒಂದೊಂದೇ ತೋಳವು ಅರಚುತ್ತಾ ನೆಲದಲ್ಲಿ ಹೊರಳುತ್ತಿತ್ತು. ಆ ವಿಧವಾಗಿ ಶತ್ರುಸಂಹಾರ ಮಾಡಿ, ತರುವಾಯ ಸಾವಕಾಶವಾಗಿ ಮನುಷ್ಯನನ್ನು ಸವಿಯ ಬೇಕೆಂಬಂತೆ ಹುಲಿಯ ಧೋರಣೆಯಿದ್ದಿತು. ತಡಮಾಡುವಂತಿಲ್ಲ. ಸಮರಸೇನನು ತಟಕ್ಕನೆ ಬಿಲ್ಲಿಗೆ ಬಾಣಹೂಡಿ ಗುರಿ ಹಿಡಿದು ಹುಲಿಯನ್ನು ಹೊಡೆದನು. ಆ ಪೆಟ್ಟಿಗೆ ಹುಲಿ ಬೊಬ್ಬರಿಸುತ್ತಾ ಕೆಳಗೆ ಬಿತ್ತು.

ಕೂಡಲೇ ಸೈನಿಕರು ಮುಂದಕ್ಕೆ ಹಾರಿದರು. ಹಸಿದ ತೋಳಗಳು ಅರಚುತ್ತಾ ಅವರ ಮೇಲಕ್ಕೆ ಎಗರಿದುವು. ಸೈನಿಕರು ಸ್ವಲ್ಪವೂ ಹಿಂಜರಿಯದೆ ಕತ್ತಿಗಳಿಂದ ಅವುಗಳನ್ನು ಕಡಿದು ಹಾಕಿದರು. ಅಷ್ಟರಲ್ಲಿ ಬೇಗ ಬೇಗನೇ ಸಮರಸೇನನು ಅಲ್ಲಿಗೆ ಬಂದು ಮರಕ್ಕೆ ಬಿಗಿಯಲ್ಪಟ್ಟ ಮನುಷ್ಯನನ್ನು ಬಂಧಮುಕ್ತ ಮಾಡಿದನು.

"ಸಮಯಕ್ಕೆ ನೀವು ಬರುವಂತೆ ಮಾಡಿದ ಮಹಾದೇವಿಗೆ ನಮಸ್ಕಾರ. ನನ್ನ ಪ್ರಾಣ ಕಾಪಾಡಿದ ನೀವು ಮಹಾನುಭಾವರು. ನಿಮ್ಮ ಪಾದಕ್ಕೆ ಬಿದ್ದೇ. ಎಂದೂ ಮರೆಯಲಾರೆ ನಿಮ್ಮನ್ನು!" ಎಂದು ಅವನು ಸಮರಸೇನನಿಗೆ ಅಡ್ಡಬಿದ್ದು ಸೈನಿಕರಿಗೂ ನಮಸ್ಕರಿಸಿದನು.

ಆ ಮನುಷ್ಯನ ರೂಪರೇಖೆಗಳು, ಮಾತಾಡಿದ ರೀತಿ, ಮರ್ಯಾದೆಗಳನ್ನು ನೋಡಿ ಸಮರಸೇನನಿಗೆ ಅತ್ಯಾಶ್ಚರ್ಯವಾಯಿತು. ಇವನು ಈ ಕಾಡು ಮಾಂತ್ರಿಕರ ದ್ವೀಪಕ್ಕೆ ಸಂಬಂಧಿಸಿದವನಲ್ಲವೆಂದು ತಿಳಿದುಕೊಂಡನು. ಮುಖಲಕ್ಷಣದಿಂದ ಬಹುಶಃ ಕುಂಡಲಿನೀ ದ್ವೀಪವಾಸಿಯೋ ಎಂಬ ಅನುಮಾನ ಕೂಡ ತಲೆ ಹಾಕಿತು.

"ನಿನ್ನದು ಯಾವ ದೇಶ?" ಎಂದು ಅವನನ್ನು ಕೇಳಿದನು ಸಮರಸೇನ.

"ನಾನು ಕುಂಡಲಿನೀ ದ್ವೀಪ ರಾಜ್ಯದ ಒಬ್ಬ ಸೈನಿಕ. ಅಲ್ಲಿಯ ಸೇನಾನಾಯಕರಾದ ಮಹಾಯೋದ್ಧರು ಸಮರಸೇನ ದೊರೆಗಳೆಂದರೆ ತಾವೇ ಅಂತ ಕಾಣುತ್ತದೆ!" ಎಂದು ಆ ವ್ಯಕ್ತಿ ಹೇಳಲು, ಸಮರಸೇನನಿಗೂ, ಸೈನಿಕರಿಗೂ ಆದ ಆಶ್ಚರ್ಯ ಅಷ್ಟಿಷ್ಟಲ್ಲ. ಈ ಹೊಸಬನು ತಮ್ಮೊಂದಿಗೆ ಹಡಗಿನಲ್ಲಿ ಬಂದವನಂತೂ ಅಲ್ಲ. ಹಾಗಾದರೆ ಇವನು ಈ ದ್ವೀಪಕ್ಕೆ ಯಾವಾಗ ಬಂದ? ಹೇಗೆ ಬಂದ? ಏತಕ್ಕೆ ಬಂದ? ಯಾರು ಕಳುಹಿಸಿದರು?






ಕುಳಿತರು. ಕಡೆಗೆ ಚಿತ್ರಸೇನ ಮಹಾರಾಜರು ಆಸ್ಥಾನ ಜ್ಯೋತಿಷ್ಕರಿಂದ ಅಂಜನ ಹಾಕಿಸಿ ನೀವು ಎಲ್ಲಿ ಯಾವ ಪರಿಸ್ಥಿತಿಯಲ್ಲಿ ಇರುವಿರಿ ಎಂಬುದನ್ನು ಬಹಳ ಮಟ್ಟಿಗೆ ತಿಳಿದರು. ತುಫಾನಿನಿಂದ ನಿಮ್ಮ ಕೆಲವು ಹಡಗುಗಳು ಮುಳುಗಿ, ಉಳಿದವರು ಒಂದಾನೊಂದು ದ್ವೀಪದಲ್ಲಿ ಸೇರಿ ಬದುಕಿರುವ ಸಂಗತಿ ಗೊತ್ತಾಯಿತು.

"ಇಷ್ಟು ತಿಳಿದ ಮೇಲೆ ಚಿತ್ರಸೇನ ಮಹಾರಾಜರು ಮಂತ್ರಿ ಸಾಮಂತರೊಂದಿಗೆ ಆಲೋಚನೆ ಮಾಡಿದರು. ನೀವೆಲ್ಲ ದಿಕ್ಕುದೆಸೆ ತಿಳಿಯದೆ ಹೊಸತಾದೊಂದು ಭಯಂಕರ ದ್ವೀಪದಲ್ಲಿರುವುದರಿಂದ ನಿಮಗೆಲ್ಲಾ ದೊಡ್ಡ ಕೇಡು ಬರುವ ಸಂಭವವಿದೆಯೆಂದು ಅವರೆಲ್ಲ ನಿರ್ಣಯಿಸಿದರು. ನಿಮ್ಮನ್ನು ರಕ್ಷಿಸಬೇಕಾದ್ದು ಕರ್ತವ್ಯವೆಂದುಕೊಂಡು, ಕುಂಭಾಂಡರ ನಾಯಕತ್ವದಲ್ಲಿ ಕೆಲಮಂದಿ ಸೈನಿಕರನ್ನು ನಿಮ್ಮನ್ನು ಹುಡುಕಲಿಕ್ಕಾಗಿ ಕಳುಹಿಸಿಕೊಟ್ಟರು."

ಹೊಸ ಸೈನಿಕನು ಇವರ ಮನಸ್ಸಿನ ಆಲೋಚನೆಯನ್ನು ತಿಳಿದವನಂತೆ ಹೀಗೆ ಹೇಳತೊಡಗಿದನು: "ನೀವು ಆ ದಿನ ಹಡಗುಗಳಲ್ಲಿ ಪ್ರಯಾಣ ಹೊರಡುವಾಗ ಆಕಾಶದಲ್ಲಿ ಧೂಮಕೇತು ಕಾಣಿಸಿತಲ್ಲವೆ? ಆಸ್ಥಾನ ಜ್ಯೋತಿಷ್ಕರು ಹೇಳಿದ ಮಾತನ್ನು ಮೀರಿ ನೀವು ಹೊರಟೇಬಿಟ್ಟಿರಷ್ಟೆ? ಆ ಮೇಲೆ ಸ್ವಲ್ಪ ಹೊತ್ತಿಗೆ ತುಫಾನು ಪ್ರಾರಂಭವಾಗಿ, ಅದು ನೀವು ಹೊರಟ ದಿಕ್ಕಿಗೇ ಹರಡುವುದೆಂದು ಗೊತ್ತಾಯಿತು. ಸಮುದ್ರವು ಅಲ್ಲಕಲ್ಲೋಲವಾಯಿತು. ಇದನ್ನು ನೋಡಿ ಚಿತ್ರಸೇನ ಮಹಾರಾಜರು ತುಂಬಾ ಕಳವಳಪಟ್ಟರು. ನಿಮ್ಮ ಕ್ಷೇಮಕ್ಕಾಗಿ ನಾಲ್ಕೈದು ದಿನಗಳವರೆಗೆ ಕುಂಡಲಿನೀ ದೇವಿಗೆ ಪೂಜೆಗಳೂ, ಉತ್ಸವಗಳೂ ನಡೆಯಿಸುವ ಏರ್ಪಾಡು ಮಾಡಿದರು.

"ಆದರೆ ತುಫಾನು ತುಂಬಾ ಭಯಂಕರವಾಗಿತ್ತು. ನಿಮ್ಮೆಲ್ಲರ ಗತಿ ಏನಾಯಿತೋ ಎಂಬ ಭಯದಿಂದ ಮಹಾರಾಜರೂ ಪ್ರಜೆಗಳೂ ಅನ್ನನೀರು ಬಿಟ್ಟು

ಹೊಸ ಸೈನಿಕನು ಇಷ್ಟು ಹೇಳುತ್ತಿರಲು, ಸಮರಸೇನನು, ಹುಬ್ಬುಗಳನ್ನೇರಿಸಿ, "ಯಾವ ಕುಂಭಾಂಡ?... ಓಹೋ! ಕುಂಭಾಂಡ ಸಂಸ್ಥಾನಾಧಿಪತಿಯೋ?" ಎಂದನು ನೆನಪಿಗೆ ತಂದುಕೊಂಡು.

"ಹೌದು, ಅವರೇ! ಇನ್ನು ಅವರಿಗೆ ಗೌರವ ಕೊಡಲಾರೆ. ಆ ದುಷ್ಟನಿಂದಲೇ ನಾನು ಇಂತಹ ಪ್ರಾಣಾಪಾಯಕ್ಕೆ ಸಿಕ್ಕಿಕೊಂಡೆ!" ಎಂದು ಹೊಸ ಸೈನಿಕನು ಹಲ್ಲು ಕಡಿದನು.

ಈ ಮಾತು ಕೇಳಿ ಸಮರಸೇನನು ಬೆರಗಾದನು. ಅವನ ಜತೆಯ ಸೈನಿಕರಿಗೂ ಏನೂ ಅರ್ಥವಾಗದೆ ನೋಡಿದರು. ಮತ್ತೆ ಆ ಹೊಸ ಸೈನಿಕನು ಹೇಳತೊಡಗಿದನು:

"ಹಡಗುಗಳಲ್ಲಿ ಹೊರಟ ನಾವು ಕೆಲವು ದಿನಗಳಲ್ಲಿ ಈ ದ್ವೀಪವನ್ನು ನೋಡಿದೆವು. ಇಲ್ಲಿಯ ದಕ್ಷಿಣ ಪ್ರಾಂತದಲ್ಲಿ ಹಡಗಿನಿಂದ ಇಳಿದು ತೀರವನ್ನು

ಸೇರಿದೆವು. ಕುಂಭಾಂಡನು ನಮ್ಮೆಲ್ಲರನ್ನೂ ತೀರದಲ್ಲೇ ಇರುವಂತೆ ಹೇಳಿ, ಇಬ್ಬರು ಸೈನಿಕರೊಂದಿಗೆ ದ್ವೀಪದೊಳಗೆ ಹೋದನು.

"ಆ ದಿನವೀಡೀ ನಾವು ಅವನ ಬರುವಿಕೆಯನ್ನೇ ಇದಿರು ನೋಡುತ್ತ ಕಾಲ ಕಳೆದೆವು. ಮರುದಿನ ಬೆಳಿಗ್ಗೆ ಸೂರ್ಯೋದಯವಾಗಿ ಅಷ್ಟು ಹೊತ್ತೇರಿದ ಮೇಲೆ ಕುಂಭಾಂಡನು ಒಬ್ಬನೇ ನಮ್ಮ ಬಳಿಗೆ ಬಂದ. ಹಾಗೆ ಬರಲು ಕಾರಣವೇನೆಂಬುದನ್ನು ಸರಿಯಾಗಿ ಹೇಳದೆ, ಇದು ತನ್ನ ಆಜ್ಞೆ ಎನ್ನುತ್ತ, ನಮ್ಮ ಹತ್ತಿರವಿದ್ದ ಬಿಲ್ಲುಬಾಣಗಳನ್ನೆಲ್ಲಾ ತರಿಸಿ ಅವನ ಮುಂದೆ ಇಡಲು ಹೇಳಿದ. ಆಮೇಲೆ ಅವುಗಳನ್ನೆಲ್ಲಾ ಕಟ್ಟುಕಟ್ಟಿಸಿ ಸಮುದ್ರದೊಳಗೆ ಬಲವಂತದಿಂದ ಬಿಸಾಡಿಸಿಬಿಟ್ಟ ! ಎಷ್ಟು ಆಲೋಚನೆ ಮಾಡಿದರೂ ಕುಂಭಾಂಡನ ಈ ವಿಚಿತ್ರವರ್ತನೆಗೆ ಕಾರಣವೇನೆಂದು ಗೊತ್ತಾಗಲಿಲ್ಲ. ಅವನ ಜತೆಯಲ್ಲಿ ದ್ವೀಪದೊಳಗೆ ಹೋದ ಇಬ್ಬರು ಸೈನಿಕರು ಏನಾದರೆಂಬುದೂ ತಿಳಿಯಲಿಲ್ಲ. ನಾವು ತುಂಬಾ ಒತ್ತಾಯ ಮಾಡಿ ಕೇಳಿದ ಮೇಲೆ ಅವರನ್ನು ಅಡವಿ ಜಾತಿಯವರು ಕಡಿದು ಕೊಂದುಬಿಟ್ಟರೆಂದು ಕುಂಭಾಂಡನ ಹೇಳಿದ.

"ಅದನ್ನು ಕೇಳಿದ ಮೇಲೆ ನಮಗೆಲ್ಲಾ ಕುಂಭಾಂಡನ ಮೇಲೆ ಅನುಮಾನವಾಯಿತು. ನಮ್ಮ ಬಿಲ್ಲುಬಾಣಗಳನ್ನೆಲ್ಲಾ ಸಮುದ್ರದಲ್ಲಿ ಹಾಕಿಸಿದ್ದೇಕೆಂದು ಮೇಲಿಂದ ಮೇಲೆ ಕೇಳಿದೆವು. ಅದಕ್ಕೆ ಕುಂಭಾಂಡನು ರೇಗಿಬೀಳುತ್ತ, ಸೇನಾನಾಯಕನಾದ ತಾನು ಏನು ಮಾಡಿದರೂ ಯಾರೂ ಪ್ರಶ್ನಿಸಕೂಡದೆಂದು ಕಠಿಣವಾಗಿ ಬುದ್ಧಿ ಹೇಳಿದ."

ಈ ಮಾತು ಕೇಳಿ ಸಮರಸೇನನು, "ಹಾಗಾದರೆ ಕುಂಭಾಂಡನು ಕೂಡಾ ತನ್ನ ಬಿಲ್ಲುಬಾಣಗಳನ್ನು ಸಮುದ್ರಕ್ಕೆ ಬಿಸುಟನೇ ?" ಎಂದು ಪ್ರಶ್ನಿಸಿದನು.




"ಅದೇ ಇಲ್ಲ ! ಅದೇ ಆಶ್ಚರ್ಯ ! ಅವನು ತನ್ನ ಬಿಲ್ಲುಬಾಣಗಳನ್ನು ಮಾತ್ರ ತನ್ನಲ್ಲೇ ಇಟ್ಟುಕೊಂಡಿದ್ದ. ಆಮೇಲೆ ಸ್ವಲ್ಪ ಹೊತ್ತಿಗೆಲ್ಲಾ ಯಾರೋ ಓಡಿ ಬರುವ ಬೊಬ್ಬೆ ಕೇಳಿಸಿತು. ಈಟೀ ಡಾಲುಗಳನ್ನು ಕುಣಿಸಿಕೊಂಡು ಅನೇಕ ಮಂದಿ ಕಾಡುಜನರು ಭಯಂಕರವಾಗಿ ಬೊಬ್ಬಿಡುತ್ತ ನಮ್ಮ ಕಡೆಗೆ ಬರುತ್ತಿದ್ದರು. ಅವರು ನಮ್ಮನ್ನು ಕೊಲ್ಲಲಿಕ್ಕೆ ಬರುವ ಹಾಗಿದ್ದರು. ನಮ್ಮ ಹತ್ತಿರ ಯಾವ ಆಯುಧವೂ ಇಲ್ಲದ್ದರಿಂದ ಅಲ್ಲಿ ದೊರಕಿದ ಕಲ್ಲುಗಳಿಂದಲೂ, ಮರದ ತುಂಡು ಕೋಲುಗಳಿಂದಲೂ ಆತ್ಮರಕ್ಷಣೆಗೆ ತೊಡಗಿದೆವು.

"ಆಗ ಕುಂಭಾಂಡನು ನಮ್ಮನ್ನೆಲ್ಲಾ ಆ ಕಾಡುಜಾತಿಯವರಿಗೆ ಶರಣಾಗಿಬಿಡುವಂತೆ ಆಜ್ಞಾಪಿಸಿದ. ಅವನ ವಿಚಿತ್ರವಾದ ಆಜ್ಞೆ ಕೇಳಿ ನಮಗೆ ಅತ್ಯಾಶ್ಚರ್ಯವಾಯಿತು. ಅಷ್ಟರೊಳಗೆ ನಮ್ಮಲ್ಲಿ ಅನೇಕರು ಆಟವಿಕರ ಈಟಿಯ ಮೊನೆಗೆ ಬಲಿಯಾಗಿ



ಹೋದರು. ಉಳಿದವರು ಓಡಿಹೋಗಲೂ ದಾರಿಯಿಲ್ಲದೆ ಜೀವ ಉಳಿದರೆ ಸಾಕೆಂಬ ಒಂದೇ ಉದ್ದೇಶದಿಂದ ಅವರಿಗೆ ಶರಣಾಗತಿಯಾಗಿ ನೆಲದಲ್ಲಿ ಬಿದ್ದೆವು" ಎಂದನು ಆ ಸೈನಿಕ.

"ಇಷ್ಟೊಂದು ಹೋರಾಟ ನಡೆಯುವಾಗ, ತಮ್ಮವರು ಸಾಯುವಾಗ ಕುಂಭಾಂಡ ನಿಮಗೇನೂ ಸಹಾಯ ಮಾಡಲಿಲ್ಲವೇ ?" ಎಂದು ಸಮರಸೇನನು ಕೋಪಾವೇಶದಿಂದ ಕೇಳಿದ.

"ಏನೂ ಮಾಡದೆ ಸುಮ್ಮನೆ ನಿಂತಿದ್ದ. ಆಟವಿಕರು ಅವನ ಗೋಜಿಗೆ ಹೋಗಲಿಲ್ಲ. ನಾವೆಲ್ಲ ಶರಣಾದ ಕೂಡಲೇ ನಮ್ಮ ತೋಳುಗಳನ್ನು ಹಿಂದಕ್ಕೆ ಬಿಗಿದು ಕಟ್ಟಿಹಾಕಿದರು. ಕುಂಭಾಂಡನನ್ನು ಮಾತ್ರ ಮರದ ದಿಮ್ಮಿಗಳಿಂದಾದ ಅಂದಣದ ಮೇಲೆ ಕೂಡಿಸಿ ನಾಲ್ಕು ಜನರು ಹೊತ್ತುಕೊಂಡು ಉತ್ಸಾಹದಿಂದ ಕೇಕೇ ಹಾಕುತ್ತ ಕುಣಿಯುತ್ತ ತಮ್ಮ ಹಳ್ಳಿಗಳ ಕಡೆಗೆ ಹೋದರು. ನಾವೆಲ್ಲಾ ಅವರ ಬಂದಿಗಳಾದೆವು. ಕುಂಭಾಂಡನು ಆ ಕಾಡುಜನರಿಗೆಲ್ಲ ರಾಜನಾದ ಹಾಗೆ ವ್ಯವಹರಿಸತೊಡಗಿದನು. ಆ ಕಾಡುಜಾತಿಯವರು ಅವನು ಏನು ಹೇಳಿದರೂ ಹಾಗೆ ಮಾಡುತ್ತಿದ್ದರು. ಅವರ ಮೇಲೆ ಕುಂಭಾಂಡನು ಅಷ್ಟೊಂದು ಅಧಿಕಾರವನ್ನು ಹೇಗೆ ಸಂಪಾದಿಸಿದನೋ ನಮಗೆ ಅರ್ಥವಾಗಲಿಲ್ಲ" ಎಂದನು ಹೊಸ ಸೈನಿಕ.

ಸಮರಸೇನನು ಸ್ವಲ್ಪ ಆಲೋಚಿಸಿ, "ಹೌದು, ಅದರಲ್ಲಿರುವ ಅವನ ಸ್ವಾರ್ಥವೇನೆಂಬುದು ನನಗೂ ಅರ್ಥವಾಗಲಿಲ್ಲ. ಆಮೇಲೆ ಏನಾಯಿತು ?" ಎಂದು ಪ್ರಶ್ನೆ ಮಾಡಿದನು.

"ಆಮೇಲೆ ಅರ್ಥವಾಯಿತು. ನಮಗೆ ಬಂದ ಅನುಮಾನಕ್ಕೆ ಮತ್ತೆ ಎರಡು ದಿನಗಳಲ್ಲಿ ಉತ್ತರ ಸಿಕ್ಕಿತು. ಆ ಕಾಡುಜನರಿಗೆ ಬಿಲ್ಲುಬಾಣಗಳೆಂದರೆ ಏನೆಂದು ಗೊತ್ತಿರಲಿಲ್ಲ. ಮನುಷ್ಯನು ಕದಲದೆ ಒಂದು ಕಡೆಯಲ್ಲಿ ನಿಂತು ಆಕಾಶದಲ್ಲೆಲ್ಲಿಯೋ ಇರುವ ಪಕ್ಷಿಯನ್ನಾಗಲೀ, ದೂರದಲ್ಲಿರುವ ಪ್ರಾಣಿಯನ್ನಾಗಲೀ, ಬಾಣದಿಂದ ಹೊಡೆದುಕೊಲ್ಲುವುದೆಂದರೆ ಅವರಿಗೆ ದೊಡ್ಡ ಮಹಿಮೆಯ ಹಾಗೆ ಕಾಣುತ್ತಿತ್ತು. ಕುಂಭಾಂಡನು ಆ ಮಹಿಮೆ ತನಗೆ ಒಬ್ಬನಿಗೇ ಇದೆಯೆಂದು ಹೇಳಿಕೊಂಡು, ನಮ್ಮ ಬಿಲ್ಲು ಬಾಣಗಳನ್ನೆಲ್ಲ ಸಮುದ್ರಕ್ಕೆ ಹಾಕಿಸಿದ್ದು ಆಟವಿಕರ ಮೇಲೆ ಪ್ರಭುತ್ವ ಸಂಪಾದಿಸಲಿಕ್ಕಾಗಿಯೇ ಅಂತ ನಮಗೆ ಗೊತ್ತಾಯಿತು." ಎಂದನು ಸೈನಿಕ.

"ಹೌದು ಹೌದು, ಆ ಮೇಲೆ ?" ಎಂದು ಕುಂಭಾಂಡನು ಕೇಳಲು, ಸೈನಿಕನು ಮುಂದುವರಿಸಿದ ; "ಒಂದು ದಿನ ಅಡವಿ ಪ್ರಾಂತದೊಳಗೆಲ್ಲಾ ತಮಟೆಯ ಶಬ್ದ ಮಾರ್ಮೊಳಗ ತೊಡಗಿತು. ಎಲ್ಲೆಲ್ಲಿಯ ಆಟವಿಕರು ನೂರಾರು ಸಂಖ್ಯೆಯಲ್ಲಿ ನಾವಿರುವ ಹಳ್ಳಿಗೆ ಬಂದರು. ಅವರಿಗೆಲ್ಲಾ ತಮ್ಮ ಹೊಸ ರಾಜನನ್ನು ನೋಡುವ ಕುತೂಹಲ. ಏನು ಬೊಬ್ಬೆ ! ಏನು ಕುತೂಹಲದ ಕೋಲಾಹಲ ! ತಮಟೆಗಳ ಶಬ್ದ

ಗಳಿಂದ ನಮ್ಮ ಕಿವಿ ಕಿವುಡಾಗಿ ಹೋಯಿತು. ಅವರೆಲ್ಲರ ಮುಂದೆ ಈ ದುಷ್ಟ ಬುದ್ಧಿಯ ರಾಜದ್ರೋಹಿ ಕುಂಭಾಂಡ, ತನ್ನ ಮಹಿಮೆಯನ್ನು ಪ್ರದರ್ಶನ ಮಾಡಿದ. ಎಲ್ಲಿಯೋ ಆಕಾಶದಲ್ಲಿ ಹಾರುತ್ತಿದ್ದ ಒಂದು ಹದ್ದನ್ನು ಬಾಣದ ಏಟಿನಿಂದ ನೆಲಕ್ಕೆ ಬೀಳಿಸಿದ. ಆ ಮೇಲೆ ದೂರದಲ್ಲಿದ್ದ ಒಂದು ಜಿಂಕೆ ಅವನ ಬಾಣಕ್ಕೆ ಬಲಿಯಾಯಿತು. ಕೇಳುವುದೇನು, ಹೇಳುವುದೇನು ? ಯಾರೂ ಇಲ್ಲದ ಊರಿಗೆ ಮರದಡಿ ಮಾರಮ್ಮನೇ ಮುತ್ತೈದೆ ಎಂಬ ಹಾಗೆ ಕುಂಭಾಂಡನ ಮಹಾ ಶಕ್ತಿಗೆ ಆಟವಿಕರೆಲ್ಲಾ ಅದ್ಭುತಗೊಂಡರು. ತಮಗೆ ಇಂತಹ ರಾಜನು ಸಿಕ್ಕಿದನೆಂದು ಸಂತೋಷದಿಂದ ಅವನ ಸುತ್ತಲೂ ಕುಣಿದು ಕುಪ್ಪಳಿಸಿದರು. ಆ ಮೂಢ ಮೊರಟು ಕಾಡಾಡಿಗಳ ಸಹಾಯದಿಂದ ತಾನು ಈ ಮೊತ್ತ ದ್ವೀಪಕ್ಕೂ ರಾಜನಾಗಬೇಕೆಂಬುದೇ ಕುಂಭಾಂಡನ ಉದ್ದೇಶವೆಂಬುದು ನಮಗೆಲ್ಲಾ ಗೊತ್ತಾಯಿತು. ಅವನು ಯಾವ ಕೆಲಸದ ಮೇಲೆ ಯಾರ ಆಜ್ಞೆಯ ಮೇರೆಗೆ ಹೊರಟು ಬಂದನೆಂಬುದನೆಲ್ಲಾ ಪೂರ್ತಿ ಮರೆತನು. ಇದಕ್ಕಿಂತ ಹೆಚ್ಚಿನ ರಾಜದ್ರೋಹ ಇನ್ನೇನಿದೆ ? ಇಲ್ಲಿಯ ಈ ಮೊರಡರನ್ನು ಮರುಳು ಮಾಡಿ ದಂಡೆತ್ತಿಕೊಂಡು ಹೋಗಿ ತನ್ನ ಪ್ರಭುವಿನ ಮೇಲೆ ಬಿದ್ದು ಕುಂಡಲಿನೀ ದ್ವೀಪವನ್ನೂ ತಾನೇ ಆಳಬೇಕೆಂದಿರುವನೋ ಏನೋ ? ಇದಂತೂ ಹೊಸ ದ್ವೀಪ. ಇನ್ನೂ ಒಳಗೊಳಗೆ ಏನೇನಿದೆಯೋ ತಿಳಿಯಲಿಲ್ಲ, ಮೊದಲು ಇದನ್ನು ಹೇಗೆ ಆಳುತ್ತಾನೋ ? ಏನು ಮಾಡುತ್ತಾನೋ ? " ಎಂದು ಸೈನಿಕನು ಸುಮ್ಮನಾದನು.

ಸಮರಸೇನನು ಮುಗುಳುನಕ್ಕು, "ಇಲ್ಲಿ ಆವನಿಗೆ ಆಳಲಿಕ್ಕೆ ಏನಿದೆ ? ಒಂದನ್ನೊಂದು ನುಂಗುವ ಪರ್ವತ ಪ್ರಾಣಿಗಳು, ಕಾಡುಮೃಗಗಳು, ಯಾವಾಗೆಂದರಾವಾಗ ಸಿಡಿದೇಳುವ ಅಗ್ನಿ ಪರ್ವತಗಳು, ಒಬ್ಬರಿಗಿಂತ ಒಬ್ಬರು ಅದ್ಭುತ ಶಕ್ತಿವಂತರಾದ ಮಾಂತ್ರಿಕರು ! ಇವರನ್ನೇ ಆಳಬೇಕು !" ಎಂದನು.

"ಮಾಂತ್ರಿಕರೇ ! ನೀವು ನೋಡಿದಿರಾ ! ಅಯ್ಯಯ್ಯೋ ! " ಎಂದು ಆ ಸೈನಿಕನು ಸುತ್ತಲೂ ತಿರುಗಿ ನೋಡಿ, "ಅವರನ್ನು ಕುರಿತು ಆಟವಿಕರು ಆಗಾಗ ಹೇಳುವುದನ್ನು ಕೇಳಿದ್ದೇನೆ. ಆದರೆ..." ಎಂದು ಆ ಸೈನಿಕನ ಮಾತು ಮುಗಿಯುವುದರೊಳಗೆ, "ಕೇಳಿದ್ದು ಮಾತ್ರವೇ, ನೋಡಿಲ್ಲವಾದರೆ ಇಗೋ ಪ್ರತ್ಯಕ್ಷ ನೋಡಬಹುದಲ್ಲಾ !" ಎಂಬ ಕಂಚಿನಂಥ ಕಂಠಸ್ವರವು ಸುತ್ತುಮುತ್ತಲೂ ಮಾರ್ಮೊಳಗಿತು. ಮರುಕ್ಷಣದಲ್ಲಿ ಮಹಾಪಾಯಾ ಮಾಂತ್ರಿಕ ಚತುರ್ನೇತ್ರನು ತನ್ನ ಕುಚ್ಚು ಟೋಪಿಯನ್ನು ಕೈಯಲ್ಲಿ ಹಿಡಿದುಕೊಂಡು ಮುಗುಳ್ನಗುತ್ತ ಅವರ ಮುಂದೆ ಪ್ರತ್ಯಕ್ಷನಾದನು, (ಇನ್ನೂ ಇದೆ)






# ಒಂದೇ ಬಗೆಯ ಶಿಕ್ಷೆ

**ಹೊ**ರೆಯನ್ನು ಹೊತ್ತು ಹೊತ್ತು ಮೊರಡುಗಟ್ಟಿದ ಹೆಗಲಿನವನಾದ ರಾಜಾತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವ ವನ್ನು ಕೆಳಕ್ಕಿಳಿಸಿ. ತನ್ನ ಹೆಗಲಿನ ಮೇಲೆ ಹೊತ್ತು ಕೊಂಡು ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾ ರಾಜನೇ, ಈ ಅರ್ಧರಾತ್ರಿಯ ಹೊತ್ತಿನಲ್ಲಿ ನೀನು ಹೀಗೆ ಶವವನ್ನು ಹೊರುವ ನಿಶ್ಚಯದಲ್ಲಿರುವುದನ್ನು ನಾನು ತಪ್ಪೆನ್ನುವುದಿಲ್ಲ, ಆದರೆ ರಾಜರು ಮನಸ್ಸಿನಲ್ಲಿ ಮಾಡಿಕೊಳ್ಳುವ ನಿಶ್ಚಯಗಳು ಯಾವಾಗಲೂ ಸರಿ ಯೆನ್ನುವಂತಿಲ್ಲ, ಇದಕ್ಕೆ ನಿದರ್ಶನವಾಗಿ ನಿನಗೆ ಜ್ಞಾನಶೀಲನೆಂಬ ರಾಜನು ದೊಡ್ಡ ಕಳ್ಳರನ್ನು ಶಿಕ್ಷಿಸಿದ ಉದಂತವನ್ನು ಕುರಿತು ಒಂದು ಕಥೆ ಹೇಳುತ್ತೇನೆ. ಕೇಳುತ್ತಾ ಸಾಗಿದರೆ ನಡೆಯುವ ಬಳಲಿಕೆ ತಿಳಿಯದು" ಎಂದು ಹೀಗೆ ಕಥೆಯನ್ನು ಪ್ರಾರಂಭ ಮಾಡಿತು :

ಜ್ಞಾನಶೀಲನು ಮಗಧ ರಾಜ್ಯದ ಆಡಳಿತವನ್ನು ತನ್ನ ಕೈಯಲ್ಲಿ ತೆಗೆದುಕೊಂಡ ಕಾಲದಲ್ಲಿ ದೇಶದೊಳಗೆಲ್ಲಾ ಅರಾಜಕವೇ ತಾಂಡವಿಸಿಕೊಂಡಿದ್ದಿತು. ಅಕ್ರಮ

## ಬೇತಾಳ ಕಥೆಗಳು



ಅದರ ಮೇಲೆ ವಿಚಿತ್ರವೆನಿಸುವಂತೆ ಶ್ರೀಮಂತರಿಂದ ಕೊಳ್ಳೆ ಹೊಡೆದ ಧನವನ್ನು ಆ ಕಳ್ಳರು ಬಡ ಜನರಿಗೆ ದಾನ ಮಾಡುವ ಸಮಾಚಾರವೂ ರಾಜನಿಗೆ ಗೊತ್ತಾಯಿತು,

ಅಷ್ಟು ಮಾತ್ರವಲ್ಲದೆ ಈ ಕಳ್ಳತನಗಳನ್ನು ಮಾಡುವವರು ಬೇರೆ ಬೇರೆ ಇಬ್ಬರು ಕಳ್ಳರೆಂಬುದೂ ತಿಳಿದು ಬಂತು. ಒಂದೇ ಸಾರಿ ಒಂದೇ ಕಾಲದಲ್ಲಿ ಎರಡು ಸ್ಥಳಗಳಲ್ಲಿ ಕಳ್ಳತನಗಳಾದ ಸಂಭವಗಳೆಷ್ಟೋ ಇದ್ದುವು, ಒಬ್ಬನೇ ಕಳ್ಳನಿಂದ ಹೀಗೆ ಮಾಡಲು ಸಾಧ್ಯವಿಲ್ಲವಷ್ಟೆ?

ಈ ಕಳ್ಳರನ್ನು ಹಿಡಿಯಬೇಕಾದುದು ತನ್ನ ಮುಖ್ಯ ಕರ್ತವ್ಯವೆಂದು ರಾಜನಿಗೆ ತೋರಿತು. ಕಳ್ಳರು ರಕ್ಷಕ ಭಟರ ಕೈಗೆ ಸುಲಭವಾಗಿ ಸಿಕ್ಕಿ ಬೀಳುವವರಾಗಿರಲಿಲ್ಲ. ಅವರನ್ನು ಹಿಡಿಯಲು ಏನು ಉಪಾಯ ಮಾಡುವುದೆಂದು ರಾಜನು ಮಂತ್ರಿಯ ಆಲೋಚನೆ ಕೇಳಿದನು.

"ಕಳ್ಳರನ್ನು ಹಿಡಿದುಕೊಡುವವನಿಗೆ ಬಹುಮಾನ ಕೊಡುವೆವೆಂದು ಪ್ರಕಟಿಸಿ ಬಿಡೋಣ. ಬಡಬಗ್ಗರಿಗೆಲ್ಲ ಕಳ್ಳರು ಸಹಾಯಕರೆಂಬ ವಿಷಯ ಸ್ಪಷ್ಟವಾದುದರಿಂದ, ಅವರಿಗೆ ಕಳ್ಳರ ಇರುವಿಕೆ ಎಲ್ಲಿ ಏನೆಂಬುದೆಲ್ಲ ಗೊತ್ತೇ ಇರುತ್ತದೆ. ನಾವು ಕೊಡುವ ಬಹುಮಾನಕ್ಕೆ ಆಶೆ ಪಟ್ಟು ಅವರು ಕಳ್ಳರನ್ನು ಹಿಡಿದುಕೊಡಬಹುದು," ಎಂದನು ಮಂತ್ರಿ.

ಈ ಆಲೋಚನೆಯನ್ನು ರಾಜನು ಖಂಡಿತವಾಗಿ ನಿರಾಕರಿಸಿ ಬಿಟ್ಟನು. "ನಾವು ಒಂದು ಸಾರಿ ಮಾತ್ರ ಕೊಡುವ ಬಹುಮಾನಕ್ಕಾಗಿ ಬಡ ಜನರು ತಮಗೆ ಯಾವಾಗಲೂ ಸಹಾಯ ಮಾಡಿಕೊಂಡಿರುವ ಕಳ್ಳರಿಗೆ ದ್ರೋಹ ಮಾಡುವರೆಂದು ನನಗೆ ಅನಿಸುವುದಿಲ್ಲ. ಬಡ ಪ್ರಜೆಗಳಲ್ಲಿ ಕೃತಜ್ಞತೆಯ ಹೃದಯ ಬಲವಾಗಿ ಬೇರೂರಿರುತ್ತದೆ. ಅದೇ ಕಳ್ಳರಿಗೆ ಬಲವಾದ ರಕ್ಷೆ. ಅದಲ್ಲದೆ ನಾವು ಪ್ರಜೆಗಳಿಗೆ ಧನದ ಆಶೆಯನ್ನು ಹುಚ್ಚುವುದೆಂದರೆ, ಲಂಚಕೋರತನವನ್ನು ಅವರಿಗೆ ತೋರಿಸಿಕೊಡುವಂತಾಗುತ್ತದೆ. ಅದರೊಂದಿಗೆ

ಗಳೂ ಅನ್ಯಾಯಗಳೂ ತುಂಬಾ ಹರಡಿಕೊಂಡಿದ್ದುವು. ಅದರ ನಡುವಿನಲ್ಲಿ ಸಿಕ್ಕಿಕೊಂಡು ಪ್ರಜೆಗಳು ನರಕ ವೇದನೆ ಅನುಭವಿಸುತ್ತಿದ್ದರು. ಈ ಪರಿಸ್ಥಿತಿಯನ್ನು ನೋಡಿ ಜ್ಞಾನಶೀಲನು ಬೇರೆ ದಾರಿಗಾಣದೆ, ದಂಡನೀತಿಯನ್ನು ಪ್ರಯೋಗಿಸಿ, ದೇಶದೊಳಗಿನಿಂದ ಅಪರಾಧಿಗಳನ್ನು ಅಡಗಿಸಿದನು. ರಾಜಭೀತಿಯಿಂದ ಅಪರಾಧಗಳ ಸಂಖ್ಯೆ ಬಹಳ ಮಟ್ಟಿಗೆ ತಗ್ಗಿತು. ಪ್ರಜೆಗಳಿಗೆ ಸ್ವಲ್ಪ ಮಟ್ಟಿಗೆ ನೆಮ್ಮದಿಯೂ ಉಂಟಾಯಿತು. ರಾಜನೂ ಸಮಾಧಾನಪಟ್ಟನು.

ಆದರೆ ಜ್ಞಾನಶೀಲರಾಜನ ಉದ್ದೇಶ ಪೂರ್ತಿಯಾಗಿ ನೆರವೇರಲಿಲ್ಲ, ಅಲ್ಲಲ್ಲಿ ಕಳ್ಳತನಗಳು ನಡೆಯುವ ಸಮಾಚಾರ ಬರತೊಡಗಿತು. ಅವೆಲ್ಲಾ ದೊಡ್ಡ ದೊಡ್ಡ ಕಳ್ಳತನಗಳೇ. ಆ ಬಗೆಯ ಕಳ್ಳತನಗಳಿಂದ ಬಡ ಜನರಿಗೇನೂ ತೊಂದರೆಯಾಗದಿದ್ದರೂ ಶ್ರೀಮಂತರಿಗೆ ನೆಮ್ಮದಿಯಿಲ್ಲದಾಯಿತು, ಕಣ್ಣಿಟ್ಟು ಶ್ರೀಮಂತರ ಮನೆಗಳನ್ನೇ ದೋಚುತ್ತಿದ್ದರು ಕಳ್ಳರು.

ನಮ್ಮಿಂದ ಕಳ್ಳರನ್ನು ಹಿಡಿಯಲು ಸಾಧ್ಯವಿಲ್ಲವೆಂಬುದನ್ನೂ ತೋರಿಸಿಕೊಟ್ಟಂತಾಗುತ್ತದೆ. ಒಟ್ಟಿನ ಮೇಲೆ ಸಾಧಾರಣ ಜನರಾರೂ ಕಳ್ಳರನ್ನು ಹಿಡಿದುಕೊಡುವವರಲ್ಲ, ಧನಿಕರಿಂದ ಅವರನ್ನು ಹಿಡಿಯಲು ಸಾಧ್ಯವಿಲ್ಲ. ಆದುದರಿಂದಲೇ ಈ ಬಗೆಯ ಕಳ್ಳತನಗಳು ಇಷ್ಟೊಂದು ವಿಶ್ರಂಖಲೆಯಾಗಿ ಸಾಗಿಕೊಂಡಿದೆ. ನಾವು ಪ್ರಜೆಗಳ ಒಳಿತಿಗಾಗಿ ಎಷ್ಟೋ ಕೆಲಸ ಮಾಡಿದ್ದೇವೆ, ಕಳ್ಳರನ್ನು ಕೂಡಾ ನನ್ನ ಸ್ವಂತ ಶಕ್ತಿಯಿಂದಲೇ ಹಿಡಿದು ತೀರುತ್ತೇನೆ," ಎಂದನು ರಾಜ.

ಕಳ್ಳನನ್ನು ಹಿಡಿಯಲು ಕಳ್ಳನೇ ಸಮರ್ಥನು. ಅಂತಲೇ ರಾಜನು ಮಾರುವೇಷದಿಂದ ರಾತ್ರಿಯ ಹೊತ್ತಿನಲ್ಲಿ ಸಂಚರಿಸುತ್ತ ಕಳ್ಳರನ್ನು ಕುರಿತು ಕೆಲವು ವಿಷಯಗಳನ್ನು ಸಂಗ್ರಹಿಸಿದನು. ಅವರು ಇಬ್ಬರು ಬೇರೆ ಬೇರೆ ಕಳ್ಳರೆಂಬುದು ನಿಜವೇ. ಇಬ್ಬರೂ ಗೌರವಸ್ಥ ಕುಟುಂಬಗಳಿಗೆ ಸೇರಿದವರೇ ಆದರೂ, ಕಳ್ಳತನವನ್ನೇ ವೃತ್ತಿಯನ್ನಾಗಿ ಮಾಡಿಕೊಂಡ ಕುಟುಂಬದವರಲ್ಲ. ಒಬ್ಬನ ಹೆಸರು ಸಿಂಗ. ಇನ್ನೊಬ್ಬನ ಹೆಸರು ಸುಬ್ಬ. ದೇಶವು ಅರಾಜಕವಾಗಿದ್ದ ಕಾಲದಲ್ಲಿ ಅವರು ಕಳ್ಳರಾಗಿದ್ದರು.

ಇಷ್ಟೆಲ್ಲ ತಿಳಿದ ಮೇಲೆ ರಾಜನು ತನ್ನ ಅಂಗರಕ್ಷಕರ ಸಹಾಯದಿಂದ ಆ ಇಬ್ಬರು ಕಳ್ಳರನ್ನೂ ಹಿಡಿದುಬಿಟ್ಟನು. ಆ ಮೇಲೆ ತುಂಬಿದ ಸಭೆಯಲ್ಲಿ ಅವರ ವಿಚಾರಣೆ ನಡೆಸಿದನು. ತಾವು ಕಳ್ಳತನ ಮಾಡಿದುದು ನಿಜವೇ ಎಂದು ಅವರಿಬ್ಬರೂ ಒಪ್ಪಿಕೊಂಡರು. ಆದರೆ ಸಿಂಗ ಎಂಬವನು ಈ ರೀತಿಯಾಗಿ ಹೇಳಿದನು:

"ಮಹಾ ಪ್ರಭುಗಳೇ. ತಾವು ಪಟ್ಟಕ್ಕೆ ಬರುವ ಮೊದಲು ನಮಗೆ ಕಳ್ಳತನದ ಹೊರತು ಬೇರೆ ದಾರಿಯೇ ಇರಲಿಲ್ಲ. ಆ ಕಾಲದಲ್ಲಿ ಮಾಡಿದ ಕಳ್ಳತನಗಳನ್ನು ಕುರಿತು ನಾನು ಪಶ್ಚಾತ್ತಾಪಪಡಲಾರೆನು. ಆದರೆ ತಮ್ಮ ಪರಿಪಾಲನೆಯಲ್ಲಿ ನಾನು ಕಳ್ಳತನ ಮಾಡಿದ್ದು ಪೂರ್ತಿ ಸ್ವಾರ್ಥ ಚಿಂತನೆಯಿಂದಲೇ ಎಂಬುದು ನಿಜ. ಚೋರ ವಿದ್ಯೆಯ ಪ್ರದರ್ಶನದಲ್ಲಿ ನನ್ನ ಜಾಣತನವನ್ನು ಬಿಟ್ಟು ಸುಮ್ಮನಿರಲು ನನ್ನಿಂದಾಗಲಿಲ್ಲ. ಲಾಭವೂ ಇರುವುದರಿಂದ, ನಾನು



ಕದ್ದ ಧನದಿಂದ ಬೇಕು ಬೇಕಾದುದನ್ನೆಲ್ಲಾ ಸಂಗ್ರಹಿಸಿಕೊಂಡು ಸುಖವಾಗಿದ್ದೇನೆ. ಆದರೆ ಈ ಸುಬ್ಬ ಹಾಗಲ್ಲ. ಇವನು ಮೊದಲಿನಿಂದಲೂ ಬಡಬಗ್ಗರಿಗೆ ಸಹಾಯ ಮಾಡಿಕೊಂಡು ಬಂದವನು. ಅವನು ತಾನು ಕದ್ದುದನ್ನು ತನ್ನ ಸುಖಕ್ಕಾಗಿ ಸ್ವಲ್ಪವೂ ವಿನಿಯೋಗಿಸಲಿಲ್ಲ. ಅಂಥವನು ಒಂದು ದಿನ ನನ್ನ ಮನೆಯನ್ನೂ ಕದಿಯುವನೇನೋ ಎಂಬ ಸಂಶಯ ನನಗಿದೆ,"

ಸುಬ್ಬನು ವಿಚಾರಣೆಯಲ್ಲಿ ಹೆಚ್ಚೇನೂ ಹೇಳಲಿಲ್ಲ. ರಾಜನು ಇಬ್ಬರು ಕಳ್ಳರಿಗೂ ಆಮರಣಾಂತ ಕಾರಾಗೃಹ ಶಿಕ್ಷೆಯನ್ನು ವಿಧಿಸಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಜ್ಞಾನಶೀಲರಾಜನು ಆ ಇಬ್ಬರು ಕಳ್ಳರೊಳಗಿನ ವ್ಯತ್ಯಾಸ ತಿಳಿದು ಕೂಡಾ, ಇಬ್ಬರಿಗೂ ಒಂದೇ ಬಗೆಯ ಶಿಕ್ಷೆಯನ್ನು ವಿಧಿಸಿದನೇಕೆ? ಇದಕ್ಕೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದೆ ಹೋದರೆ ನಿನ್ನ ತಲೆಯೊಡೆಯುತ್ತದೆ !" ಎಂದು ಸುಮ್ಮನಾಯಿತು.

ಆದಕ್ಕೆ ತ್ರಿವಿಕ್ರಮನು ಹೀಗೆಂದು ಪ್ರತ್ಯುತ್ತರವಿತ್ತನು: "ರಾಜಧರ್ಮದ ವಿಶಾಲ ದೃಷ್ಟಿಗೂ ಚೋರರ ಆಶಯಗಳಿಗೂ ವ್ಯತ್ಯಾಸವಿದೆ. ರಾಜಧರ್ಮದ ಮುಂದೆ ಚೋರತನಕ್ಕೆ ಯಾವ ಬೆಲೆಯೂ ಇರಲು ಸಾಧ್ಯವಿಲ್ಲ. ಧನಿಕರಿಂದ ದೋಚಿಕೊಂಡು, ಬಡಬಗ್ಗರಿಗೆ ಹಂಚಿದ ಮಾತ್ರಕ್ಕೆ ಅದು ಅಪರಾಧವಲ್ಲವೆನಿಸುವುದೂ ಇಲ್ಲ; ಆದರಿಂದ ದೇಶಕೆ ಸಂಪನ್ನತೆ ಬರುವುದೂ ಇಲ್ಲ. ಅಡಿಮಟ್ಟದಲ್ಲಿರುವ ಬಡ ಜನರ ಸಮಸ್ಯೆಗಳು ರಾಜಕೀಯವಾದ ಕೃತಿಗಳ ಮೂಲಕ ಕಾಲಕ್ರಮದಲ್ಲಿ ಪರಿಷ್ಕಾರವಾಗಬೇಕೇ ಹೊರತು, ಕಳ್ಳತನಗಳ ಮೂಲಕವಾಗಿ ಪರಿಷ್ಕಾರವಾಗದು. ದೇಶವು ಅಭಿವೃದ್ಧಿಗೇರಲು ಜ್ಞಾನಶೀಲ ರಾಜನು ಮಾಡುವ ಪ್ರಯತ್ನಗಳು ಒಂದು ಬದಿಯಲ್ಲಿ ಫಲಿಸಲು ಪ್ರಾರಂಭಿಸುವ ಸಮಯಕ್ಕೆ, ಬಡತನದ ಸಮಸ್ಯೆಯನ್ನು ಕೃತ್ರಿಮ ರೀತಿಯಲ್ಲಿ ಪರಿಷ್ಕರಿಸಲು ನೋಡುವ ಕಳ್ಳನ ಮೂಲಕವಾಗಿ ರಾಜಕೀಯದಿಂದಾಗುವ ಫಲಿತಕ್ಕೆ ಬೆಲೆಯಿಲ್ಲದೆ ಹೋಯಿತು. ಪ್ರಜೆಗಳಲ್ಲಿ ರಾಜನಿಗಿಂತ ಕಳ್ಳನೇ ವಾಸಿ ಎಂಬಭಾವನೆ ಪ್ರಬಲಿಸುವಂತೆ ಅದು ಮಾಡಿ ಬಿಡುವಂತಹುದು. ಬಡ ಜನರಿಗೆ ಕಳ್ಳನು ಸಹಾಯ ಮಾಡುವನೆಂಬ ಸಂಗತಿ ರಾಜನಿಗೆ ಪ್ರಜೆಗಳಿಂದಲೇ ತಿಳಿದು ಬಂದಿದೆ. ಈ ಪರಿಸ್ಥಿತಿಯಲ್ಲಿ ರಾಜನಾದವನು ಸುಮ್ಮನೆ ನೋಡುತ್ತಾ ಸಹಿಸಲು ಸಾಧ್ಯವಿಲ್ಲ. ಆದುದರಿಂದ ರಾಜನು ಇಬ್ಬರು ಕಳ್ಳರನ್ನೂ ಒಂದೇ ವಿಧವಾದ ಶಿಕ್ಷೆಗೆ ಗುರಿ ಪಡಿಸಿದುದರಲ್ಲಿ ತಪ್ಪೇನೂ ಇಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಹಾರಿ ಹೋಗಿ ಮರದ ಕೊಂಬೆಯನ್ನು ಹಿಡಿದು ನೇತಾಡ ತೊಡಗಿತು



# ಬದುಕಬಲ್ಲವನು

ವ್ಯಾಪಾರದಲ್ಲಿ ಜೀವನವೆಲ್ಲಾ ಕಳೆದು ಕಡೆಗೆ ನಷ್ಟಪಟ್ಟು ಅಂಗಡಿ ಮುಚ್ಚಬೇಕಾಯಿತು ರಾಮಯ್ಯನಿಗೆ. ಮುಂದೆ ತನ್ನ ಮಗ ಗೋಪಾಲನ ಭವಿಷ್ಯ ಹೇಗೋ ಎಂದು ಚಿಂತೆ ಹಿಡಿಯಿತು.

ಒಂದು ದಿನ ನಗರದಿಂದ ದೊಡ್ಡ ವ್ಯಾಪಾರಿಯಾಗಿ ಬದುಕುತ್ತಿರುವ ರಂಗಯ್ಯ ತನ್ನ ಊರಿಗೆ ಬಂದ. ಅವನೂ ರಾಮಯ್ಯನ ಊರಿನವನೇ ಆದುದರಿಂದ, ಅವನೊಡನೆ ರಾಮಯ್ಯ ತನ್ನ ಮಗನ ಭವಿಷ್ಯತ್ತನ್ನು ಕುರಿತು ತನಗಿರುವ ಕಳವಳವನ್ನು ತೋಡಿಕೊಂಡನು.

ಆಗ ರಂಗಯ್ಯ ಗೋಪಾಲನನ್ನು ಕರೆದು, "ನೀನು ಮುಂದಾಗಿ ನಗರದಲ್ಲಿರುವ ನನ್ನ ಮನೆಗೆ ಹೋಗಿ ಅಮ್ಮನ ಹತ್ತಿರ ಈ ಕಾಗದ ಕೊಡು. ಅಲ್ಲೇ ಇರು. ನಾನು ನಾಳೆ ಅಲ್ಲಿಗೆ ಬರುತ್ತೇನೆ" ಎಂದು ಹೇಳಿ, ಒಂದು ಕಾಗದ ಕೊಟ್ಟು ಕಳುಹಿಸಿದನು.

ನಗರದ ರಂಗಯ್ಯನ ಮನೆಯಲ್ಲಿ ಅವನ ಹೆಂಡತಿಯೂ ತಾಯಿಯೂ ಇದ್ದರು. ರಂಗಯ್ಯನ ತಾಯಿ ಗೋಪಾಲನಿಗೆ ಬಡಿಸುತ್ತ, ಸೊಸೆ ಸಮೀಪ ಇಲ್ಲದ್ದನ್ನು ನೋಡಿ, "ನನ್ನ ಸೊಸೇನ ನೋಡಿದಿಯಪ್ಪ ? ಮಹಾ ಗಯ್ಯಾಳಿಯಪ್ಪಾ ! ನನ್ನನ್ನು ಹುರಿದು ತಿನ್ನುತ್ತಾಳೆ ! ಒಂದು ದಿನ ಅವಳು ಮಾತ್ರ ಅತ್ತೆಯಾಗಲೀ ! ತಿನ್ನುತ್ತಾಳೆ ಆಗ ಅದರ ಫಲ !" ಎಂದಳು.

"ಹಣ್ಣಾದ ಎಲೆಗಳನ್ನು ನೋಡಿ ಚಿಗುರೆಲೆಗಳು ಗೇಲಿ ಮಾಡೋದು ಇದ್ದದ್ದೇ. ತಾವು ಕೂಡಾ ಉದುರಿ ಹೋಗುವ ಕಾಲ ಬರುತ್ತೇ ಅಂತ ಅವುಗಳಿಗೆ ತಿಳಿಯದು. ಆ ಕಾಲವೂ ಬಾರದೆ ಇರುತ್ತದೆಯೆ ?" ಎಂದು ಗೋಪಾಲ ಅವಳಿಗೆ ಸಮಾಧಾನ ಹೇಳಿದ.

ಮಧ್ಯದಲ್ಲಿ ಅತ್ತೆ ಆಚೆಗೆ ಹೋಗಿ ಸೊಸೆ ಬಡಿಸಲು ಬಂದಳು. ಅವಳು ಗೋಪಾಲನೊಂದಿಗೆ, "ನನಗೆ ಎಂಥಾ ರಾಕ್ಷಸಿ ಅತ್ತೆಯಾಗಿ ಗಂಟು ಬಿದ್ದಳು ! ನೀನು ಕೂಡಾ ಅತ್ತೆಯಾಗಿ ಅನುಭವಿಸುವ ಕಾಲ ಬಾರದೆ ಹೋಗುತ್ತೆಯೇ ಅಂತ ಯಾವಾಗಲೂ ನನ್ನನ್ನು ಚುಚ್ಚುತ್ತಾ ಇರುತ್ತಾರೆ ! ಈ ಸಂಕಟ ಎಷ್ಟು ದಿನ ತಾಳಿಕೊಳ್ಳಬೇಕೋ ?" ಎಂದಳು.

"ಎಲ್ಲರೂ ಒಂದು ದಿನ ಸಾಯಲೇಬೇಕು ಅಂತ ಚಿಕ್ಕಂದಿನಿಂದಲೇ ಕಟ್ಟಿಗೆ ತಯಾರಿಸಿ ಇಟ್ಟುಕೊಳ್ಳುತ್ತೇವೆಯೇ ? ಸುಮ್ಮನಿದ್ದರಾಯಿತು" ಎಂದು ಗೋಪಾಲ ಸಹಾನುಭೂತಿಯಿಂದ ಹೇಳಿದ.

ಮರು ದಿನ ರಂಗಯ್ಯ ಬಂದು ತನ್ನ ಹೆಂಡತಿಯೊಂದಿಗೂ ತಾಯಿಯೊಂದಿಗೂ ಗೋಪಾಲ ಹೇಳಿದ ಮಾತು ತಿಳಿದುಕೊಂಡು, "ನಿನ್ನ ಮಗನು ಲೋಕ ವ್ಯವಹಾರ ತಿಳಿದವನು. ಯಾವ ಕೆಲಸದಲ್ಲಿಯೂ ಮುಂದೆ ಬರುತ್ತಾನೆ" ಎಂದು ರಾಮಯ್ಯನಿಗೆ ಸುದ್ದಿ ಕಳುಹಿಸಿದನು.





# ಹಕ್ಕು

ತಂಗಳೂರು ಎಂಬೊಂದು ಗ್ರಾಮದಲ್ಲಿ ಶಾಮಣ್ಣನೆಂಬವನು, ತಾನಾಯಿತು ತನ್ನ ಕೆಲಸವಾಯಿತು ಎಂಬ ಹಾಗೆ ತುಂಬ ಶಾಂತ ಗುಣದವನಾಗಿದ್ದ. ಪಾಲಿಗೆ ಬಂದದ್ದು ಪಂಚಾಮೃತ ಎಂಬ ತೃಪ್ತಿ ಅವನಿಗೆ. ಮಿತಭಾಷಿಯಾದುದರಿಂದ ಯಾರ ತಂಟೆಗೂ ಹೋಗುತ್ತಿರಲಿಲ್ಲ. ಊರವರೆಲ್ಲಾ ಅವನನ್ನು ಏನೂ ಅರಿಯದ ಸಾಧುವಾದ ಮಂದಬುದ್ಧಿಯವನೆಂದೇ ಲೆಕ್ಕ ಹಾಕಿಬಿಟ್ಟಿದ್ದರು.

ಆದರೆ ಶಾಮಣ್ಣನ ಹೆಂಡತಿ ಕಮಲೆ ತುಂಬಾ ಗಡುಸು ಹೆಣ್ಣು. ಅವಳ ನಾಲಗೆ ಬಲುಜೋರು. ಅವಳ ಮಾತುಗಳೆಂದರೆ ಎಲ್ಲರೂ ಹೆದರುತ್ತಿದ್ದರು. ಅಷ್ಟು ಸಾಲದ್ದಕ್ಕೆ ಹಣದ ಆಸೆ ಕೂಡಾ ಅವಳಿಗೆ ಹೆಚ್ಚು. ಅವಳ ಗಡುಸುತನದಿಂದಾಗಿ ಹಿರಿಯ ಮನೆ ಪಾಲಾಗಿ ಶಾಮಣ್ಣ ತಂಗಳೂರಿಗೆ ಬಂದು ಪ್ರತ್ಯೇಕ ಸಂಸಾರ ಹೂಡಿಕೊಂಡಿದ್ದನು. ಆದುದರಿಂದ ಕಮಲೆ ತನ್ನಿಷ್ಟಪ್ರಕಾರ ಮನೆಖರ್ಚು ಬಹಳಮಟ್ಟಿಗೆ ತಗ್ಗಿಸಿ ಹಣ ಉಳಿಸಿಕೊಂಡು, ಅದರಿಂದ ಬಡ್ಡೀ ವ್ಯವಹಾರ ಮಾಡುತ್ತ, ಹಾಗೆ ಸೇರಿದ ಹಣದಿಂದ ನಗಗಳನ್ನು ಮಾಡಿಸಿಕೊಂಡು ತೊಟ್ಟು ಮೆರೆಯುತ್ತಿದ್ದಳು. ಗಂಡ ಪಾಪದವನಾದುದು ಅವಳಿಗೆ ಒಳ್ಳೆಯದಾಯಿತು.

ಹೀಗಿರುವಾಗ ಶಾಮಣ್ಣನ ತಮ್ಮ ದಾಮು ಸ್ನೇಹಿತರೊಂದಿಗೆ ರಾಜಧಾನಿಯ ವಿಶೇಷ ನೋಡಲು ಹೊರಟು, ಮನೆಯಲ್ಲಿ ಹಣವಿಟ್ಟುಕೊಳ್ಳಲು ಅಂಜಿ, ತಂಗಳೂರಿಗೆ ಬಂದು, ಅಣ್ಣನ ಹತ್ತಿರ ಹಣದ ಚೀಲವನ್ನು ಭದ್ರವಾಗಿರಿಸಲು ಹೇಳಿ ಹೊರಟುಹೋದನು.

ಕಮಲೆ ಕುತೂಹಲದಿಂದ ಮೈದುನನು ಕೊಟ್ಟ ಚೀಲದಲ್ಲಿ ಎಷ್ಟು ಹಣವಿದೆಯೆಂದು ಎಣಿಸಿ ನೋಡಿದಳು. ಆರುನೂರು ರೂಪಾಯಿಗಳಿದ್ದುವು. ಅದನ್ನು ನೋಡುತ್ತಿದ್ದಂತೆ ಅವಳಿಗೆ ಆಸೆ ಉಕ್ಕೆದ್ದು ಬಂದಿತು. ಅದನ್ನು ಸ್ವಂತ ಮಾಡಿಕೊಳ್ಳುವುದು ಹೇಗೆಂದು ಆಲೋಚಿಸುತ್ತ, ಒಂದು ನಿಶ್ಚಯಕ್ಕೆ ಬಂದಳು.

ಶಾಮಣ್ಣನಿಗೆ ಏನೋ ಒಂದು ಕೆಲಸದ ನಿಮಿತ್ತವಾಗಿ ನಗರಕ್ಕೆ ಹೋಗಬೇಕಾಯಿತು. ಕಮಲೆ ಅವನೊಂದಿಗೆ ಸವಿಸವಿಯಾಗಿ ಮಾತಾಡುತ್ತ, "ಏನೂಂದ್ರೆ, ನನ್ನ ಐದೆಳೆಯ ಚಿನ್ನದ ಗೊಲಸನ್ನೂ ಸ್ವಲ್ಪ ಹಣವನ್ನೂ ಕೊಡುತ್ತೇನೆ. ನಗರದಲ್ಲಿ ಈ ಗೊಲಸಿಗೆ ಆರನೇ ಎಳೆಯೊಂದನು

ಜಿ. ವಿಜಯ

ಮಾಡಿಸಲು ಕೊಡಿ. ಜಾಗ್ರತೆಯಾಗಿ ತೆಗೆದುಕೊಂಡು ಹೋಗುವಿರಷ್ಟೆ ?" ಎಂದಳು.

ಶಾಮಣ್ಣ ನಗವನ್ನೂ ಹಣದ ಚೀಲವನ್ನೂ ತೆಗೆದುಕೊಂಡನು. ಹಣದ ಚೀಲ ದಾಮುವಿನದೆಂದು ತಿಳಿದು, "ಇದು ನಮ್ಮ ಹಣ ಅಲ್ಲವಲ್ಲಾ ? ದಾಮುವಿನದಲ್ಲವೇ ?" ಎಂದು ಧೈರ್ಯದಿಂದ ಅವಳ ಮೋರೆ ನೋಡಿದನು.

"ಹಾಗಂದರೇನ್ರೀ ! ಇಷ್ಟೇನಾ ನಿಮ್ಮ ಬುದ್ಧಿ ? ದಾಮು ನಮಗೆ ಪರಕೀಯ ಅಂದುಕೊಳ್ತೀರೇನು ? ಸಾಕ್ಷಾತ್ ನಿಮ್ಮ ತಮ್ಮ ! ಅವನ ಹಣ ನಮ್ಮದಲ್ಲವೆಂದು ಹೇಳ್ತೀರಲ್ಲಾ ? ಅವನು ನಮ್ಮ ಮಗ ಇದ್ದ ಹಾಗೆ. ಅಂಥವನ ಹಣವನ್ನು ಅನುಭವಿಸುವ ಹಕ್ಕು ನನಗೆ ಇಲ್ಲವೇ ? ಇದ್ದೇ ಇದೆ. ಇಲ್ಲವೆನ್ನುವವರು ನನ್ನ ಮುಂದೆ ಬಂದು ಹೇಳಲಿ !" ಎಂದಳು ಮಹಾ ಧೀರೆಯ ಹಾಗೆ ಕಮಲೆ.

"ಹೌದೌದು ! ದಾಮು ನಮ್ಮ ಮಗನ ಹಾಗೇನೇ ! ಅಲ್ಲವೆಂದವರಾರು ?" ಎಂದು ಹೇಳಿ ಶಾಮಣ್ಣ ನಗವನ್ನೂ ಅವಳು ಕೊಟ್ಟ ಹಣದ ಚೀಲವನೂ ತೆಗೆದುಕೊಂಡು ನಗರಕ್ಕೆ ಹೊರಟನು. ಅವನು ನಗರಕ್ಕೆ ಹೋಗಿ ಮುಟ್ಟಿದಾಗ ಹೊತ್ತು ಮುಳುಗಿ ಕತ್ತಲಾಯಿತು. ತುಂಬಾ ಬಳಲಿದುದರಿಂದ, ಶಾಮಣ್ಣ ವಿಶ್ರಾಂತಿ ಪಡೆಯಲು ಸಮೀಪದಲ್ಲಿದ್ದ ಸತ್ರಕ್ಕೆ ಹೋದನು. ಆ ಸತ್ರದಲ್ಲಿ ತನ್ನ ತಮ್ಮ ದಾಮು ತಂಗಿರುವುದನ್ನು ನೋಡಿ ಶಾಮಣ್ಣನಿಗೆ ತುಂಬಾ ಆಶ್ಚರ್ಯವಾಯಿತು.

"ಅಣ್ಣಾ, ಆಚೆಯ ಕಡೆ ಹೋಗಲಾಗದ ಹಾಗೆ ಭಾರಿ ನೆರೆ ಬಂದಿದೆ. ಆದ್ದರಿಂದ ಪ್ರಯಾಣ ಬಿಟ್ಟುಕೊಟ್ಟು ಮನೆಗೇ ಹಿಂದಿರುಗುತ್ತಿದ್ದೇವೆ. ನಾಳೆ ಬೆಳಿಗ್ಗೆ ಹೊರಟು ತಂಗಳೂರಿಗೆ ಹೋಗಿ, ನನ್ನ ಹಣ ತೆಗೆದುಕೊಂಡು, ಅಲ್ಲಿಂದ ಮನೆಗೆ ಹೋಗುತ್ತೇನೆ" ಎಂದು ದಾಮು ಶಾಮಣ್ಣನೊಂದಿಗೆ ಹೇಳಿದ.

"ಹಣಕ್ಕೋಸ್ಕರವಾದರೆ ನೀನು ತಂಗಳೂರಿಗೆ ಹೋಗುವ ಅಗತ್ಯವಿಲ್ಲ. ನಿನ್ನ ಹಣದ ಚೀಲ ನನ್ನ ಹತ್ತಿರವೇ ಇದೆ. ಆದರೆ ಆ ಹಣ ನಿನ್ನ ಅತ್ತಿಗೆ



ತೆಗೆದುಕೊಂಡುಬಿಟ್ಟಳು. ನೀನು ಅವಳಿಗೆ ಮಗನ ಹಾಗಿನವನಂತೆ. ಆದುದರಿಂದ ತಾಯಿಯ ಹಾಗೆ ನಿನ್ನ ಸೊತ್ತು ಅನುಭವಿಸುವ ಹಕ್ಕು ಅವಳಿಗಿದೆಯಂತೆ. ಇನ್ನು ಆ ಹಣದ ಮೇಲಿನ ಆಶೆ ಬಿಟ್ಟುಬಿಡಪ್ಪಾ ದಾಮೂ" ಎಂದನು ಶಾಮಣ್ಣ.

ಎಷ್ಟೋ ಕಷ್ಟಪಟ್ಟು ಕೂಡಿಸಿಟ್ಟ ತನ್ನ ಹಣದ ಗತಿ ಹೀಗಾಯಿತಲ್ಲಾ ಎಂಬ ಸಂಕಟದಿಂದ ದಾಮುವಿನ ಕಣ್ಣುಗಳು ತುಂಬಿಕೊಂಡುವು.

ತಮ್ಮನ ಸ್ಥಿತಿಯನ್ನು ನೋಡಿ ಶಾಮಣ್ಣನಿಗೆ ಕನಿಕರ ಉಂಟಾಯಿತು. ಕಮಲೆಯ ಮಾತನ್ನು ಮೀರುವುದು ಬಹಳ ಅಪಾಯವೆಂಬ ಸಂಗತಿ ಅವನಿಗೆ ಗೊತ್ತಿತ್ತು. ತಮ್ಮನ ಕಷ್ಟವನ್ನೂ ನೋಡಲಾಗಲಿಲ್ಲ. ಇದಕ್ಕೆ ತಕ್ಕ ನಿವೃತ್ತಿ ಹೇಗೆಂದು ಆಲೋಚನೆಗೆ ತೊಡಗಿದನು. ಆಗ ತಟಕ್ಕನೆ ಮಿಂಚಿನಂತೆ ಒಂದು ಆಲೋಚನೆ ತಟ್ಟಿತು.

"ಅದಕ್ಕಾಗಿ ಚಿಂತಿಸಬೇಡ ಬಿಡು. ನಿನ್ನ ತಾಯಿಯ ಹಾಗೆ ಅತ್ತಿಗೆಗೆ ತಾನೇ ನಿನ್ನ ಹಣದ ಮೇಲೆ ಹಕ್ಕು ಬಂತು? ಪರಕೀಯರಿಗೇನೂ ಅಲ್ಲವಷ್ಟೆ? ಅವಳ ಮಗನ ಹಾಗಿರುವ ನಿನಗೆ ಕೂಡಾ ಅವಳ ನಗ ತೆಗೆದುಕೊಳ್ಳುವ ಹಕ್ಕು ಇದ್ದೇ ಇದೆ. ಆದ್ದರಿಂದ ನೀನು ಈ ನಗವನ್ನು ತಕ್ಕೊಂಡುಬಿಡು. ಅವಳೇನೂ ಹೇಳಲಿಕ್ಕಿಲ್ಲ" ಎಂದು ಆ ಚಿನ್ನದ ಗೊಲಸನ್ನು ತಮ್ಮನ ಕೈಗೆ ತಿಣಿಕಿದನು. ಮಾರಣೇ ದಿನ ನಗರದ ತನ್ನ ಕೆಲಸ ಮುಗಿಸಿಕೊಂಡು ತಂಗಳೂರಿಗೆ ಹಿಂದಿರುಗಿದನು ಶಾಮಣ್ಣ.

ಶಾಮಣ್ಣ ಮಾಡಿದ ಘನಕಾರ್ಯವನ್ನು ನೋಡಿ, ಕಮಲೆ ಕೈ ಬಾಯಿ ಬಡೆದು ಕಣ್ಣುಕಣ್ಣು ತಿರುಗಿಸುತ್ತ, "ನಿಮ್ಮ ಬುದ್ಧಿಗೆ ಬೆಂಕೀ ಬಡೀತು! ಎರಡು ಸಾವಿರ ರೂಪಾಯಿಯ ನಗಗಳು! ಎಲ್ಲಾ ತಮ್ಮನಿಗೆ ಕೊಟ್ಟಿರಲ್ಲಾ! ಹೋಯಿತಲ್ಲಾ!" ಎಂದು ಅನೇಕ ಶಾಪವಾಕ್ಯಗಳನ್ನು ಕಕ್ಕಿದಳು.

ಅಷ್ಟು ದೊಡ್ಡ ತಪ್ಪು ತಾನೇನು ಮಾಡಿದೆನೋ ತಿಳಿಯದೆ ಶಾಮಣ್ಣ ಕಿಂಕಂ ಅನ್ನದೆ ಸುಮ್ಮನೆ ಕುಳಿತು ಆಚೆ ಈಚೆ ನೋಡಿದ.

ಹಾಗಿರುವಾಗ ದಾಮು ಅಲ್ಲಿಗೆ ಬಂದು, ಕಮಲೆಯ ಗೊಲಸನ್ನು ಅಣ್ಣಾ ಅತ್ತಿಗೆಯರ ಮುಂದೆ ಇಟ್ಟು, "ಏನು ಹಕ್ಕು ಇದ್ದರೂ ಲೆಕ್ಕ ಒಂದಿದೆಯಷ್ಟೇ? ಅಣ್ಣನಾದರೇನಾಯಿತು? ತಮ್ಮನಾದರೇನಾಯಿತು? ನನ್ನ ಲೆಕ್ಕದ್ದೇ ನನಗೆ ಸಿಕ್ಕಿದರಾಯಿತು. ಇದನ್ನು ತಕ್ಕೊಳ್ಳಿ!" ಎಂದನು.

ಕಮಲೆಯ ಪ್ರಾಣ ಚೇತರಿಸಿಕೊಂಡಿತು. ದಾಮು ತನ್ನ ಹಣದ ಚೀಲವನ್ನು ತೆಗೆದುಕೊಂಡು, ಹೋಗಿ ಬರುತ್ತೇನೆಂದು ಹೇಳಿ ತನ್ನ ಊರಿಗೆ ಹೊರಟು ಹೋದನು.



# ತೀಕ್ಷ್ಣ ದೃಷ್ಟಿ

**ಗೋ**ಪಾಲನೆಂಬವನು ಶರಭಯ್ಯನ ಅಂಗಡಿಯಲ್ಲಿ ಹೊಸದಾಗಿ ಕೆಲಸಕ್ಕೆ ಸೇರಿದನು. ಅವನು ಹೇಳಿದ ಕೆಲಸಗಳನ್ನು ಚುರುಕಾಗಿಯೂ ಬುದ್ಧಿವಂತಿಕೆಯಿಂದಲೂ ಮಾಡುತ್ತಿದ್ದನು.

ಒಂದು ದಿನ ಬೆಳಿಗ್ಗೆ ಶರಭಯ್ಯನು ಅಂಗಡಿಗೆ ಬಂದು ಅಂಗಿ ತೆಗೆದು ಗೋಡೆಯ ಕೊಕ್ಕೆಯಲ್ಲಿ ಸಿಗಿಸುವಾಗ ಜೇಬಿನಿಂದ ಕೆಲವು ನಾಣ್ಯಗಳು ಕೆಳಗೆ ಬಿದ್ದುವು.

ಗೋಪಾಲ ತಟ್ಟನೆ ಅವುಗಳನ್ನು ಆರಿಸಿ ಶರಭಯ್ಯನಿಗೆ ಕೊಟ್ಟನು.

ಆ ದಿನ ರಾತ್ರಿ ಶರಭಯ್ಯ ಊಟ ತಿರಿಸಿ ಕೈ ತೊಳೆದುಕೊಂಡು ತನ್ನ ಕೋಣೆಯೊಳಗೆ ಪ್ರವೇಶಿಸಿದನು. ಶರಭಯ್ಯನ ಹೆಂಡತಿ ಗಂಡನ ಎಂಜಲು ತಟ್ಟೆಯನ್ನು ಎತ್ತಲು ನೋಡುವಾಗ, ಗೋಪಾಲ ತಟ್ಟನೆ ಆ ತಟ್ಟೆಗೆ ಕೈ ಹಾಕಿ ಅದರಲ್ಲಿದ್ದ ಉಂಗುರವನ್ನು ತೆಗೆದು ಶರಭಯ್ಯನಿಗೆ ಕೊಡಲು ಕೋಣೆಗೆ ಹೋದನು.

ಮರುದಿನ ಬೆಳಿಗ್ಗೆ ಶರಭಯ್ಯನು ಗೋಪಾಲನನ್ನು ಕೆಲಸದಿಂದ ತೆಗೆದು ಹಾಕಿದನು. ಹೆಂಡತಿ ಕಾರಣವೇನೆಂದು ಕೇಳಿದಳು.

"ಬೆಳಿಗ್ಗೆ ನನ್ನ ಜೇಬಿನಿಂದ ಚಿಲ್ಲರೆ ಹಣ ಕೆಳಗೆ ಬಿತ್ತು. ನನಗೆ ಲೆಕ್ಕ ತಿಳಿಯದು ಎಂದುಕೊಂಡು ಗೋಪಾಲ ಒಂದು ರೂಪಾಯಿಯನ್ನು ಮೂಲೆಗೆ ದೂಡಿ ಉಳಿದುದನ್ನು ಹೆಕ್ಕಿಕೊಟ್ಟ. ಊಟ ಮಾಡುವಾಗ ನನ್ನ ಬೆರಳಲ್ಲಿದ್ದ ಉಂಗುರ ತಟ್ಟೆಯಲ್ಲಿ ಜಾರಿ ಬಿದ್ದಿತ್ತು. ನನ್ನ ಬೆರಳಿನಲ್ಲಿ ಉಂಗುರವಿಲ್ಲದ ಸಂಗತಿ ಅವನ ಕಣ್ಣಿಗೆ ಬಿತ್ತು. ಹೀಗೆ ನನ್ನ ಮೇಲೆ ಇಷ್ಟೊಂದು ತೀಕ್ಷ್ಣ ದೃಷ್ಟಿ ಇಡುವವನು ನನಗೆ ಉಪಯೋಗವಿಲ್ಲ" ಎಂದನು ಶರಭಯ್ಯ.





# ನಿಜವಾದ ಭೋಕ್ತರು

ವಿದ್ಯಾಪುರವೆಂಬ ಊರಿನಲ್ಲಿ ವಿರೂಪಾಕ್ಷಯ್ಯನನ್ನು ಅರಿಯದವರಿಲ್ಲ. ತುಂಬಾ ಶ್ರೀಮಂತರು. ಪ್ರತಿ ದಿನವೂ ಅವರ ಮನೆಯಲ್ಲಿ ಬಡಬಗ್ಗರಿಗೆ ಅನ್ನದಾನ ನಡೆಯುತ್ತಿದ್ದಿತು. ಹಸಿದು ಬಂದವರು ಅಲ್ಲಿ ಹೊಟ್ಟೆ ತುಂಬಿಸಿಕೊಳ್ಳದೆ ಹೋಗಲಾರರು. ಯಾವಾಗಲೂ ಇಬ್ಬರು ಮೂವರಿಗಾದರೂ ಉಳಿಯುವಷ್ಟು ಊಟ ಇದ್ದೇ ಇರುತ್ತಿತ್ತು.

ವೈಶಾಖ ಮಾಸ ಬಂತೆಂದರೆ ವಿರೂಪಾಕ್ಷಯ್ಯನ ಮಾತು ನೆರೆಹೊರೆಗಳ ಊರುಗಳಲ್ಲೆಲ್ಲಾ ಹರಡಿ ಕೊಂಡಿರುತ್ತದೆ. ಪ್ರತಿ ವೈಶಾಖ ಮಾಸದಲ್ಲಿಯೂ ವಿರೂಪಾಕ್ಷಯ್ಯನ ಮನೆಯಲ್ಲಿ ವಿಶೇಷ ರೀತಿಯ ಅನ್ನದಾನ ದಿನನಿತ್ಯವೂ ನಡೆಯುತ್ತದೆ. ಆದುದರಿಂದ ವೈಶಾಖ ಮಾಸ ಬಂದಕೂಡಲೇ ಸುತ್ತು ಮುತ್ತಲ ಊರುಗಳಿಂದ ಮಾತ್ರವಲ್ಲದೆ, ದೂರಪ್ರಾಂತಗಳಿಂದ ಕೂಡಾ ಸಾಧು ಸನ್ಯಾಸಿಗಳು ವಿದ್ಯಾಪುರಕ್ಕೆ ಬಂದು ವಿರೂಪಾಕ್ಷಯ್ಯನ ಮನೆಯ ಷಡ್ರಸೋಪೇತವಾದ ಭೋಜನವನ್ನು ಆಸೆಯಿಂದ ಸವಿಯುವರು. ಹೀಗೆಯೇ ಒಂದು ಸಾರಿ ವಿರೂಪಾಕ್ಷಯ್ಯ ವೈಶಾಖ ಮಾಸದ ಅನ್ನದಾನಕ್ಕೆ ಏರ್ಪಾಡು ಮಾಡುತ್ತಿದ್ದಾಗ ಅವರ ಪತ್ನಿ ವಿಮಲಾಕ್ಷಿ, "ಈ ವರ್ಷವಾದರೂ ನಮ್ಮ ಭೋಕ್ತರೆಲ್ಲರೂ ಸಾಧು ಸನ್ಯಾಸಿಗಳೇ ಆಗಿರುವಂತೆ ನೋಡಿಕೊಳ್ಳಿ. ದೈವಸರೂಪವಾದ ಸಾಧು ಸನ್ಯಾಸಿಗಳಿಗೆ ಏನಾದರೂ ಕೊಟ್ಟು ತೃಪ್ತಿಬಡಿಸಿದರೆ ಪುಣ್ಯವೂ ಪುರುಷಾರ್ಥವೂ ಇರುತ್ತವೆ. ಅರ್ಧಕ್ಕಿಂತ ಹೆಚ್ಚು ಬರುವ ಬಡ ಬಿಕ್ಷುಗಳಿಗೆಲ್ಲ ಅನ್ನ ಹಾಕಿ ಮೇಯಿಸುವುದರಿಂದ ಏನು ಬರುತ್ತೆ ಹೇಳಿ ?" ಎಂದಳು.

"ವಿಮಲಾಕ್ಷೀ, ನಿನಗೆ ಗೊತ್ತಿಲ್ಲ. ಕೇವಲ ಕಾಷಾಯ ವಸ್ತ್ರವನ್ನುಟ್ಟ ಮಾತ್ರಕ್ಕೆ ಎಲ್ಲರೂ ದೈವಸ್ವರೂಪರೆಂದು ಕೊಂಡೆಯಾ? ಅಂತಹ ವೇಷವೇನಿಲ್ಲದ ಸಾಧಾರಣ ಬಡಬಗ್ಗರು ನಾವು ಮಾಡುವ ಅನ್ನದಾನಕ್ಕೆ ಅನರ್ಹರೆಂದು ಭಾವಿಸುವೆಯಾ? ಇದರ ಸತ್ಯಾ ಸತ್ಯಗಳನ್ನು ನೀನೇ ನೋಡಬಹುದು. ನಾಳಿನಿಂದ ನಮ್ಮ ಅನ್ನದಾನದ ಕಾರ್ಯಕ್ರಮದಲ್ಲಿ ನಾನು ಹೇಳುವ ಹಾಗೆ ಬದಲಾವಣೆ ಮಾಡಿಸಿಬಿಡು. ಆಗ ನಾನು ಹೇಳಿದುದು ನಿಜವೋ ಸುಳ್ಳೋ ಎಂಬುದು ನಿನಗೇ ತಿಳಿಯುತ್ತದೆ" ಎಂದು ಹೇಳಿ ವಿರೂಪಾಕ್ಷಯ್ಯನು ತನ್ನ ಹೆಂಡತಿಯೊಂದಿಗೆ ಒಂದು ಆಲೋಚನೆಯನ್ನು ರಹಸ್ಯವಾಗಿ ಹೇಳಿದನು.

ಎಂ. ಡಿ. ಸೌಜನ್ಯ

ಆದರಂತೆಯೇ ಮಾಡಲು ವಿಮಲಾಕ್ಷಿ ನಿರ್ಧರಿಸಿದಳು. ವೈಶಾಖ ಮಾಸದ ಮೊದಲನೇ ದಿನದ ಕಾರ್ಯಕ್ರಮವು ಪ್ರಾರಂಭವಾಗುವಾಗ, ಹತ್ತು ಮಂದಿ ಸಾಧುಗಳು ತಮಗೇನೋ ಪ್ರತ್ಯೇಕತೆ ಇರುವ ಹಾಗೆ ಸೀದಾ ಒಳಗೆ ಬಂದು "ಜೈ ಸೀತಾರಾಂ. ಮೊದಲು ನಮ್ಮ ವೃಂದಕ್ಕೆ ಬಡಿಸಿಬಿಡಿರಿ" ಎಂದು ಸಾಲಾಗಿ ಕುಳಿತರು, ಪಂಚಭಕ್ಷ್ಯ ಪರಮಾನ್ನಗಳನ್ನೆದುರು ನೋಡುತ್ತಾ.

ಆಗ ವಿರೂಪಾಕ್ಷಯ್ಯನ ಸಹಾಯದಿಂದ ವಿಮಲಾಕ್ಷಿ, ಉಪ್ಪು, ಖಾರ, ಒಗ್ಗರಣೆ ಸೇರಿಸಿದ ಗಂಜಿಯ ಚೆರಿಗೆಯನ್ನು ಎತ್ತಿ ತಂದಿಟ್ಟು, ಹತ್ತು ಮಂದಿ ಸಾಧುಗಳ ತಟ್ಟೆಗೆ ಆ ಗಂಜಿಯನ್ನು ಬಡಿಸಿದಳು. ಇದೇನೆಂಬಂತೆ ಸಾಧುಗಳು ದುರುಗುಟ್ಟಿ ನೋಡುವಾಗ, ಅವಳು ಕೈಮುಗಿದು "ಸಾಧುಗಳೇ ಈ ವರ್ಷ ಪ್ರತಿ ವರ್ಷದ ಹಾಗೆ ಬೆಳೆ ಸರಿಯಾಗಿ ಬರದೇ ಹೋದುದರಿಂದ, ಪಂಚಭಕ್ಷ್ಯಗಳನ್ನೇನೂ ಮಾಡಿಲ್ಲ. ನಡೆದು ಬಂದ ಪದ್ಧತಿ ಬಿಡಬಾರದೆಂದು ಗಂಜಿ ತಯಾರಿಸಿದ್ದೇವೆ. ಇದನ್ನೇ ದೊಡ್ಡ ಮನಸ್ಸಿನಿಂದ ಪಂಚಭಕ್ಷ್ಯಗಳೆಂದು ಸ್ವೀಕರಿಸಬೇಕು" ಎಂದಳು. ಆ ಮಾತು ಕೇಳಿ ಸಾಧುಗಳೆಲ್ಲಾ ಉಗ್ರ ನರಸಿಂಹಗಳಂತೆ ಎದ್ದು "ಈ ಗಂಜಿ ಎಲ್ಲಿ ಹೋದರೂ ಇದ್ದದ್ದೇ! ದೂರದಿಂದ ನಾವು ನಡೆದು ಬಂದದ್ದು ಇಂತಹ ಗಂಜಿ ಕುಡಿಯಲಿಕ್ಕೇನು ? ಕೈಲಾಗದಿದ್ದರೆ ಸುಮ್ಮನಿರಬೇಕು. ಹೀಗೆ ಅನ್ನದಾನ ಮಾಡದಿದ್ದರೇನು ?" ಎಂದು ಆ ಗಂಜಿ ತಟ್ಟೆಗಳನ್ನು ಕಾಲಿನಿಂದ ಆಚೀಚೆ ದೂಡಿ ದಡದಡನೆ ಹೊರಟು ಹೋಗಿಬಿಟ್ಟರು.

ಸಾಧುಗಳಾಗಿ ಸೌಮ್ಯ ಸ್ವಭಾವದಲ್ಲಿರಬೇಕಾದನರಿಗೆ, ಭಕ್ಷ್ಯ ಭೋಜ್ಯಗಳ ಊಟ ಸಿಗದೆ ಹೋಗಲು ಇಷ್ಟೊಂದು ಕೋಪ ಬರುತ್ತದೆಂದು ವಿಮಲಾಕ್ಷಿ ಊಹಿಸಿರಲಿಲ್ಲ. ಅಂತಲೇ ಅವಳು ಮೂಕ ವಿಸ್ಮಿತಳಾದಳು.

ಬೇಗದಲ್ಲೇ ಮತ್ತೊಂದು ಸನ್ಯಾಸಿಗಳ ಗುಂಪು ಬಂದಿತು. ಅವರು ಗಡ್ಡ ಮೀಸೆಗಳನ್ನು ಸವರಿಕೊಳ್ಳುತ್ತ, ತಾವು ಅನುಭವಿಸಲಿರುವ ಔತಣವನ್ನು



ಕುರಿತು ಊಹಿಸಿಕೊಳ್ಳುತ್ತ ಸಾಲುಗಟ್ಟಿ ಕುಳಿತರು. ವಿಮಲಾಕ್ಷಿ ಮತ್ತೆ ಗಂಜಿ ತಂದು ಬಡಿಸಿ, ತುಂಬ ವಿನಯದಿಂದ ಮೊದಲನೇ ಸಾರಿ ಹೇಳಿದಂತೆಯೇ ಹೇಳಿದಳು.

ಸಮಾಚಾರ ಕೇಳಿದ ಕೂಡಲೇ ಅವರೂ ಕೂಡಾ ಎದ್ದು ಕೋಪದಿಂದ, "ದರಿದ್ರ ಹಿಡಿದವರಿಗೆ ಬಡಿಸುವಂಥ ಈ ಗಂಜಿಯ ನೀರನ್ನು ಸರ್ವಸಂಗ ಪರಿತ್ಯಾಗ ಮಾಡಿದ ನಮ್ಮಂಥವರಿಗೆ ನೀಡಲು ಕೈಯಾದರೂ ಹೇಗೆ ಬಂತು? ನಾವು ಕರ್ಮ ಸುಟ್ಟು ಸನ್ಯಾಸಿಗಳಾದೆವೇ ಹೊರತು, ಒಂದು ಕಾಲದಲ್ಲಿ ನಿಮಗಿಂತ ಚನ್ನಾಗಿ ಬದುಕಿದವರೇ !" ಎಂದು ಕೂಗಾಡಿಕೊಂಡು ತಟ್ಟೆಗಳನ್ನು ಆಚೀಚೆ ದೂಡಿ ಚರಚರನೆ ಹೊರಟು ಹೋಗಿ ಬಿಟ್ಟರು.

ಈ ವರ್ಷ ವಿರೂಪಾಕ್ಷಯ್ಯನ ಮನೆಯಲ್ಲಿ ವೈಶಾಖ ಮಾಸದ ಅನ್ನದಾನ ಬರಿಯ ಗಂಜಿ ಎಂದು ಇತರ ಸಾಧು ಸನ್ಯಾಸಿಗಳಿಗೂ, ಬ್ರಾಹ್ಮಣರಿಗೂ ತಿಳಿದು ಹೋಯಿತು. ಅವರೆಲ್ಲ ದೂರದಿಂದಲೇ ವಿರೂಪಾಕ್ಷಯ್ಯನನ್ನೂ, ವಿಮಲಾಕ್ಷಿಯನ್ನೂ ಬಯ್ಯುತ್ತಾ ಹೊರಟು ಹೋದರು. ಉಳಿದವರು ಬಡಬಗ್ಗರಾದ ಕುಂಟ ಕುರುಡ ಮೊದಲಾದ ನಿರ್ಗತಿಕರಾದವರೂ, ಕಷ್ಟಾಳುಗಳೂ ಮುಂತಾದ ಸಾಧಾರಣದ ಜನರು ಮಾತ್ರವೇ. ಅವರೆಲ್ಲಾ ಮನೆಗೆ ತುಸು ದೂರದಲ್ಲಿ ಕಾದುಕೊಂಡಿದ್ದರು. ವಿಮಲಾಕ್ಷಿ ಅವರನ್ನು ಬನ್ನಿ ಎಂದು ಕರೆಯದೆ ದೂರದಲ್ಲೇ ನಿಂತು, "ನೋಡಿರಪ್ಪಾ, ನಿಮಗೆ ಹಿಡಿಸುತ್ತೋ ಇಲ್ಲವೋ? ಈ ವರ್ಷ ನಮ್ಮ ಮನೆಯಲ್ಲಿ ಪಂಚಭಕ್ಷ್ಯ ಪರಮಾನ್ನಗಳ ಊಟವೇನೂ ತಯಾರಿಸಲಾಗಲಿಲ್ಲ. ಕೇವಲ ಗಂಜಿ ಮಾತ್ರವೇ ತಯಾರಿಸಿದ್ದೇನೆ. ಅದೂ ಕೂಡ ಒಬ್ಬೊಬ್ಬರಿಗೆ ಒಂದೊಂದು ತಟ್ಟೆ ಮಾತ್ರವೇ. ಇಷ್ಟವಿದ್ದರೆ ತೆಗೆದುಕೊಳ್ಳಿ" ಎಂದಳು.

ಆ ಮಾತು ಕೇಳಿ ಬಡ ಜನರು, "ಅದನ್ನೇ ಕೊಡಿ ತಾಯೇ, ನಾವು ದಿನಾ ಭಕ್ಷ್ಯ ಭೋಜ್ಯ ತಿನ್ನುತ್ತೇವೇನು? ಆ ಗಂಜಿಯನ್ನಾದರೂ ಕುಡಿದು ಎಷ್ಟು ಕಾಲವಾಯಿತೋ! ನಿಮ್ಮ ಕೈಯಿಂದ ಬರುವುದು ಅಮೃತವಾಗುತ್ತೆ" ಎನ್ನುತ್ತ ಹೊರಗೇ ಸಾಲುಗಟ್ಟಿ ಕುಳಿತು ಆ ಗಂಜಿಯನ್ನುಂಡು ತೃಪ್ತರಾಗಿ ವಿಶಾಲಾಕ್ಷಿಯನ್ನು ನೋಡಿ "ಅನ್ನಪೂರ್ಣೆಯಮ್ಮಾ ! ಚಿರಕಾಲ ಸುಖವಾಗಿರಿ !" ಎಂದು ಹೇಳಿ ಹೊರಟು ಹೋದರು.

ಹೀಗೆ ಹಸಿವಿನಿಂದಿರುವವರೇ ನಿಜವಾದ ಭೋಕ್ತರೆಂದು ವಿಮಲಾಕ್ಷಿಗೆ ಅರ್ಥವಾಯಿತು. ಅಂಥವರಿಗೆ ಅನ್ನದಾನ ಮಾಡಿದರೇನೇ ಪುಣ್ಯವೆಂದೂ, ಪುರುಷಾರ್ಥವೆಂದೂ ಅವಳಿಗೆ ತಿಳಿಯಿತು.





# ಅದ್ಭುತವಾದ ಬಲೆ

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಆ ರಾಜನ ಹತ್ತಿರ ಕ್ರಯಾಧಿಕಾರಿಯ ಉದ್ಯೋಗದಲ್ಲಿದ್ದನು. ಯಾವುದನ್ನೂ ಕೊಂಡುಕೊಳ್ಳಬೇಕಾದರೂ ಕ್ರಯಾಧಿಕಾರಿಯ ನಿರ್ಣಯವೇ ಕೊನೆಯದಾಗಿತ್ತು. ರಾಜ್ಯ ಪಾಲನೆಗೆ ಅವಶ್ಯವಾದ ಸ್ಥಿರ ಚರ ವಸ್ತು ವಾಹನಾದಿಗಳ ಯೋಗ್ಯಾಯೋಗ್ಯತೆಗಳು ಕ್ರಯಾಧಿಕಾರಿಗೆ ಚೆನ್ನಾಗಿ ಗೊತ್ತಿರಬೇಕು. ಅವನು ಕಟ್ಟುವ ಬೆಲೆಯೇ ಸರಿಯಾದ ಬೆಲೆಯೆಂದು ರಾಜನು ಒಪ್ಪಿಕೊಳ್ಳುತ್ತಿದ್ದನು. ಆದುದರಿಂದ ಅವನು ಪ್ರಾಮಾಣಿಕನಾಗಿರಬೇಕಾದುದು ಮುಖ್ಯ.

ಬೋಧಿಸತ್ವನು ಕಾಶೀರಾಜನಿಗೆ ಬೇಕಾಗಿ ಬರುವ ಆನೆಗಳನ್ನೂ, ಕುದುರೆಗಳನ್ನೂ, ಚಿನ್ನ ಬೆಳ್ಳಿಗಳನ್ನೂ, ವಜ್ರಗಳನ್ನೂ ಪರೀಕ್ಷೆ ಮಾಡಿ ಬೆಲೆಕಟ್ಟಿ ತನ್ನ ಲೆಕ್ಕದ ಪ್ರಕಾರವೇ ಆ ಪ್ರಾಣಿಗಳ ಬೆಲೆಕಟ್ಟಿ ವಸ್ತುಗಳನ್ನು ತಂದವರಿಗೆ ಹಣ ಸಂದಾಯ ಮಾಡಿಸುತ್ತಿದ್ದನು. ಅವನ ಲೆಕ್ಕವು ವ್ಯಾಪಾರಿಗಳಿಗೆ ತೃಪ್ತಿಕರವಾಗಿರುತ್ತಿತ್ತು.

ಆದರೆ ಬ್ರಹ್ಮದತ್ತ ರಾಜನು ಲೋಭಗುಣ ಉಳ್ಳವನಾದುದರಿಂದ, ತನ್ನ ಕ್ರಯಾಧಿಕಾರಿಯಾದ ಬೋಧಿಸತ್ವನನ್ನು ಕುರಿತು ಅವನಿಗೊಂದು ಸಂಧೇಹ ಉಂಟಾಯಿತು. ಈ ಕ್ರಯಾಧಿಕಾರಿ ಕೊಂಡುಕೊಳ್ಳುವ ಪ್ರತಿ ವಸ್ತುವಿಗೂ ಹೆಚ್ಚು ಬೆಲೆ ಕೊಡಿಸುತ್ತಾನೆಂದು ಯಾರೋ ಹೇಳಿಕೊಳ್ಳುವ ಮಾತುಗಳು ರಾಜನಿಗೆ ಗೊತ್ತಾಯಿತು. ಇದು ನಿಜವೇ ಆಗಿರಬಹುದು. ಇಲ್ಲದಿದ್ದರೆ ಹಣ ಪಡೆದುಕೊಳ್ಳುವಾಗ ವ್ಯಾಪಾರಿಗಳ ಮುಖವು ಅಷ್ಟು ಸಂತೋಷದಿಂದ ಅರಳಲು ಕಾರಣವೇನು ? ಹೀಗಾದರೆ ಬೇಗನೇ ತನ್ನ ಖಜಾನೆ ದಿವಾಳಿಯಾದೀತು.

ಹೀಗೆ ಆಲೋಚಿಸುತ್ತಾ ರಾಜನು ಒಂದು ದಿನ ಕೋಣೆಯೊಳಗೆ ಕುಳಿತು ಉದ್ಯಾನವನದ ಕಡೆಯ ಕಿಟಕಿಯ ಬಾಗಿಲುಗಳನ್ನು ತೆರೆದನು. ಅಲ್ಲಿ ಬಿಸಿಲಿನಲ್ಲಿ ಬಹಳವಾಗಿ ಶ್ರಮಿಸುತ್ತ, ಮರಗಿಡಗಳಿಗೆ ನೀರು ಹೊಯ್ಯುತ್ತಿದವನು ರಾಜನ ಕಣ್ಣಿಗೆ ಬಿದ್ದನು. ಆಗ ಅವನ ಮನಸ್ಸಿಗೆ "ಆಹಾ ! ಇವನು ಇಷ್ಟೊಂದು ನಂಬುಗೆಯುಳ್ಳವನಲ್ಲದಿದ್ದರೆ ಬಿಸಿಲಿನಲ್ಲಿ ಇಷ್ಟೊಂದು ಕೆಲಸ ಮಾಡುತ್ತಿದ್ದನೆ ?" ಎಂದು ತೋರಿತು. ನಿರ್ವಂಚಕ ಆಳೆಂದರೆ ಇವನೇ ಸರಿ ಎಂದುಕೊಂಡನು. ಮರುದಿನವೇ ರಾಜನು ಆ ತೋಟದ ಕೆಲಸ



ಮಾಡುವವನನ್ನು ಬೋಧಿಸತ್ವನ ಸ್ಥಾನದಲ್ಲಿ ಕ್ರಯಾಧಿಕಾರಿಯಾಗಿ ನಿಯಮಿಸಿ ಬಿಟ್ಟನು. ಈ ಹೊಸಬನು ವ್ಯಾಪಾರ ವಸ್ತುಗಳ, ಪ್ರಾಣಿಗಳ ಬೆಲೆ ಕಟ್ಟುವುದರಲ್ಲಿ ಒಡೆಯನಿಗೆ ತುಂಬಾ ಲಾಭದಾಯಕವಾಗಿ ಮಾಡದಿರಲಾರನೆಂದು ರಾಜನ ಆಶೆ. ಆದರೆ ಈ ಹೊಸ ಕ್ರಯಾಧಿಕಾರಿ ದುರಾಶೆ ಉಳ್ಳವನಾಗಿದ್ದನೇ ಹೊರತು ವಿವೇಕವುಳ್ಳವನಲ್ಲ. ಅಂತಲೇ ಅದು ದೊಡ್ಡ ಸಂಬಳದ ಪದವಿ ಎಂಬುದನ್ನು ನೋಡಿ ಸಂತೋಷಪಟ್ಟನು. ಅವನಿಗೆ ವಸ್ತುಗಳ ಗುಣಗಳಾಗಲೀ, ಅವಗುಣಗಳೇ ಆಗಲೀ ತಿಳಿಯದು. ಆನೆ ಕುದುರೆ ಪಶುಗಳ ಜ್ಞಾನವಂತೂ ಪರಮ ಶೂನ್ಯ. ಪ್ರಾಮಾಣಿಕತೆ ಯೆಂಬುದು ಅವನಿಗೆ ಗೊತ್ತೇ ಇರಲಿಲ್ಲ. ಆದುದರಿಂದ ಆನೆಗಳ, ಕುದುರೆಗಳ ಅಥವಾ ವಸ್ತು ಸಾಮಗ್ರಿಗಳ ವ್ಯಾಪಾರವು ಮಾಡಬೇಕಾಗಿ ಬಂದರೆ, ಅವನು ತನ್ನ ಬುದ್ಧಿಗೆ ಏನು ತೋರುವುದೋ ಅದನ್ನೇ ಬೆಲೆ ಕಟ್ಟುವನು. ಒಂದು ಸರಿಯಾದ ಪದ್ಧತಿಯೋ ಕ್ರಮವೋ ಲೆಕ್ಕವೋ ಏನೂ ಇರಲಿಲ್ಲ. ಆದುದರಿಂದ ಅನೇಕ ವ್ಯಾಪಾರಿಗಳಿಗೆ ತುಂಬಾ ನಷ್ಟ ಬರಲು ಪ್ರಾರಂಭವಾಯಿತು.

ತಮ್ಮ ಆಸ್ತಿಪಾಸ್ತಿಗಳನ್ನು ಕೊಂಡುಕೊಳ್ಳುವವನು ರಾಜನ ಕ್ರಯಾಧಿಕಾರಿಯೇ ಆದುದರಿಂದ, ನಷ್ಟಗೊಂಡರೂ ಅವರು ಪ್ರತಿಯಾಗಿ ಏನೂ ಹೇಳಲಾಗದೆ ಕುಂದಿ ಹೋಗುತ್ತಿದ್ದರು. ಸಿಕ್ಕಿದ್ದು ತೆಗೆದುಕೊಂಡು ಸಣ್ಣ ಮೋರೆ ಮಾಡಿಕೊಂಡು ಹೋಗುತ್ತಿದ್ದರು. ವರ್ತಕರು ತಮಗೆ ವ್ಯಾಪಾರದಲ್ಲಿ ನಷ್ಟವಾಯಿತೆಂದೂ, ತಮಗೆ ಅನ್ಯಾಯ ನಡೆಯಿತೆಂದೂ ಬಾಯಿಬಿಟ್ಟು ದೂರು ಹೇಳಲು ಹೆದರುತ್ತಿದ್ದರು.

ಒಂದು ದಿನ ಉತ್ತರ ದೇಶದಿಂದ ಒಬ್ಬ ಅಶ್ವ ವರ್ತಕನು ಐನೂರು ಉತ್ತಮ ಜಾತಿಯ ಕುದುರೆಗಳನ್ನು ತೆಗೆದುಕೊಂಡು ಕಾಶೀರಾಜನ ಬಳಿಗೆ ಬಂದನು. ಆ ಸಮಾಚಾರ ತಿಳಿದು ಕೂಡಲೇ ಬ್ರಹ್ಮದತ್ತ ರಾಜನು ಆಸ್ಥಾನದ ಕ್ರಯಾಧಿಕಾರಿಯನ್ನು ಬರಮಾಡಿಸಿ, ಆ ಕುದುರೆಗಳ ಯೋಗ್ಯತೆಗಳನ್ನು ಪರೀಕ್ಷಿಸಿ ಬೆಲೆ ಕಟ್ಟುವಂತೆ ಹೇಳಿದನು.

ಕ್ರಯಾಧಿಕಾರಿ ಬಂದು ಐನೂರು ಕುದುರೆಗಳನ್ನೂ ಪರೀಕ್ಷಿಸಿ ನೋಡಿದನು. ಕುದುರೆಗಳ ಬಾಲ ಹಿಡಿದು ಮೂತಿ ನಿಮಿರಿ, ಬೆನ್ನು ತಟ್ಟಿ, ಜೂಲು ಹಿಡಿದು ಎಲ್ಲಾ ಆದ ಮೇಲೆ " ಎಷ್ಟು ಆಲೋಚನೆ ಮಾಡಿದರೂ ಐನೂರು ಕುದುರೆಗಳ ಬೆಲೆ ಒಂದು ಕಳಸಿಗೆ ಅಕ್ಕಿಗಿಂತ ಹೆಚ್ಚಾಗದು. ಆದ್ದರಿಂದ ಈ ಕುದುರೆಗಳ ಯಜಮಾನನಿಗೆ ಒಂದು ಕಳಸಿಗೆ ಅಕ್ಕಿಯನ್ನು ಕೊಟ್ಟು ಕುದುರೆಗಳನ್ನು ಮಹಾರಾಜರ ಲಾಯದಲ್ಲಿ ಕಟ್ಟಿರಿ " ಎಂದು ಅಪ್ಪಣೆ ಜಾರಿ ಮಾಡಿದನು.

ಇದನ್ನು ಕೇಳಿ ಅಶ್ವ ವರ್ತಕನು ಗಾಬರಿ ಬಿದ್ದನು. ಅವನು ಬೇರೆ ವರ್ತಕರ ಹಾಗೆ ಮಾತಾಡದೆ ಸುಮ್ಮನೆ ಹೋಗಲಿಲ್ಲ. ನೇರಾಗಿ ಆಸ್ಥಾನದ ಹಳೆಯ ಕ್ರಯಾಧಿಕಾರಿಯಾದ ಬೋಧಿಸತ್ವನ ಬಳಿಗೆ ಹೋಗಿ,

ತನಗೆ ನಡೆದ ಅನ್ಯಾಯವನ್ನು ಕುರಿತು ಗೋಳಿಟ್ಟನು. ಬೋಧಿಸತ್ವನು ಅವನು ಹೇಳಿದುದನ್ನೆಲ್ಲಾ ಕೇಳಿ, "ಅಯ್ಯಾ, ನೀನು ಒಂದು ಕೆಲಸ ಮಾಡು. ಈ ಹೊಸ ಕ್ರಯಾಧಿಕಾರಿಯನ್ನು ತೃಪ್ತಿಪಡಿಸಲು ಮೊದಲು ಸ್ವಲ್ಪ ಹಣವನ್ನು ಲಂಚವಾಗಿ ಕೊಟ್ಟು ಆಮೇಲೆ ಹೀಗೆ ಹೇಳು : "ನನ್ನ ಕುದುರೆಗಳಿಗೆ ತಾವು ಕಟ್ಟಿದ ಕಳಸಿಗೆ ಅಕ್ಕಿಯ ಬೆಲೆ ನ್ಯಾಯವಾಗಿಯೇ ಇರುತ್ತದೆ. ಇಲ್ಲದಿದ್ದರೆ ನೀವು ಅಷ್ಟು ಅಕ್ಕಿಗಳ ಬೆಲೆಯನ್ನು ನನ್ನ ಕುದುರೆಗಳಿಗೆ ಕಟ್ಟುವಿರಾ ? ನಿಮ್ಮ ಗಣಿತ ಜ್ಞಾನ ದೊಡ್ಡದು. ಈ ಕಳಸಿಗೆ ಅಕ್ಕಿಯ ಬೆಲೆ ಎಷ್ಟು ಎಂಬುದನ್ನು ಮಹಾರಾಜರ ಸಭೆಯಲ್ಲಿ ಹೇಳುವಿರಾ ? ಅದನ್ನು ಕೇಳಿದರೆ ಮಹಾರಾಜರು ನಿಮ್ಮನ್ನು ಸನ್ಮಾನಿಸುವರು. ನನಗೂ ತೃಪ್ತಿ" ಹೀಗೆ ಹೇಳಿ ಅವನನ್ನು ಒಪ್ಪಿಸಿ ರಾಜ ಸಭೆಗೆ ಕರೆದು ಕೊಂಡು ಹೋಗು. ಆ ಸಮಯದಲ್ಲಿ ನಾನು ಅಲ್ಲಿದ್ದು ನಿನಗೆ ನ್ಯಾಯವು ಸಿಗುವ ಹಾಗೆ ಮಾಡುತ್ತೇನೆ" ಎಂದನು.

ಅಶ್ವ ವರ್ತಕನಿಗೆ ಸ್ವಲ್ಪ ಧೈರ್ಯ ಬಂತು. ಬೋಧಿಸತ್ವನು ಹೇಳಿದ ಹಾಗೆಯೇ ಅವನು ಕ್ರಯಾಧಿಕಾರಿಯ ಬಳಿಗೆ ಹೋಗಿ, ಅವನನ್ನು ಹೊಗಳುತ್ತಾ ಸ್ವಲ್ಪ ಹಣವನ್ನು ಲಂಚ ಕೊಟ್ಟು ಬೋಧಿಸತ್ವನು ಹೇಳಿದ ಹಾಗೆಯೇ ಹೇಳಿದನು.

ಕ್ರಯಾಧಿಕಾರಿ ಲಂಚದ ಹಣ ನೋಡಿ ಸಂತೋಷಪಟ್ಟು, "ಅದಕ್ಕೇನು ಮಹಾ ! ಕಳಸಿಗೆ ಅಕ್ಕಿಯ ಬೆಲೆಯನ್ನು ಹೇಳುವುದು ಅಷ್ಟೇನೂ ಕಷ್ಟವಿಲ್ಲ. ನಾಳೆ ಸಭೆಯಲ್ಲಿ ಮಹಾರಾಜರ ಮುಂದೆ ಹೇಳಿ ಅವರಿಂದ ಸರಿಯೆನ್ನಿಸಿ ಬಿಡುತ್ತೇನೆ. ಆಯಿತಷ್ಟೇ ?" ಎಂದನು.

ಮಾರನೇ ದಿನ ರಾಜನ ಸಭಯಲ್ಲಿ ಎಲ್ಲರೂ ಕೂಡಿದರು. ಮಂತ್ರಿಗಳೂ, ಮುಖ್ಯ ಮುಖ್ಯ ಉದ್ಯೋಗಸ್ಥರೂ ಪುರ ಪ್ರಮುಖರೂ ಬಂದಿದ್ದರು.



ಮಹಾರಾಜನ ಅನುಜ್ಞೆ ಪಡೆದು ಬೋಧಿಸತ್ವನೂ ಸಭೆಗೆ ಬಂದು ಒಂದು ಆಸನದಲ್ಲಿ ಕುಳಿತುಕೊಂಡನು.

ನಷ್ಟ ಪಡೆದ ಅಶ್ವ ವರ್ತಕನು ರಾಜನೊಂದಿಗೆ, "ಮಹಾಪ್ರಭೂ ! ತಮ್ಮ ಕ್ರಯಾಧಿಕಾರಿಯವರು ನನ್ನಿಂದ ಪಡೆದ ಐನೂರು ಕುದುರೆಗಳಿಗೆ ಒಂದು ಕಳಸಿಗೆ ಅಕ್ಕಿಯ ಬೆಲೆಯಾಗಿ ನಿರ್ಣಯಿಸಿ ಕೊಟ್ಟಿದ್ದಾರೆ. ಈ ಹೊಸ ರೀತಿಯ ಬೆಲೆ ಚೆನ್ನಾಗಿರುವುದೆನ್ನಲು ಸಂದೇಹವೇನಿಲ್ಲ. ಇದರಲ್ಲಿರುವ ಚಿಕ್ಕದೊಂದು ಅಂಶ ನನಗೆ ಗೊತ್ತಾಗಲಿಲ್ಲ. ಆ ಒಂದು ಕಳಸಿಗೆ ಅಕ್ಕಿಯ ಬೆಲೆ ಎಷ್ಟಾಗುತ್ತೋ ಅಂತ ತಿಳಿಯಬೇಕೆಂದಿದ್ದೀನೆ. ದಯಮಾಡಿ ಅದನ್ನಿಷ್ಟು ತಿಳಿಸುವಂತೆ ಅಪ್ಪಣೆ ಮಾಡಬೇಕು" ಎಂದನು.

ಆ ಕ್ಷಣದ ವರೆಗೂ ಕುದುರೆಗೆ ಎಷ್ಟು ಬೆಲೆ ಕೊಡಲಾಗಿದೆಯೆಂಬ ಸಂಗತಿ ರಾಜನಿಗೆ ತಿಳಿಯದು. ಆದುದರಿಂದ ಅವನು ವರ್ತಕನ ಮಾತನ್ನು ಕೇಳಿ ಆಶ್ಚರ್ಯಪಟ್ಟು ಹೊಸ ಕ್ರಯಾಧಿಕಾರಿಯನ್ನು

ನೋಡಿ, "ಐನೂರು ಕುದುರೆಗಳಿಗೆ ಏನು ಬೆಲೆ ಕಟ್ಟಿದೆ ?" ಎಂದು ಕೇಳಿದನು.

"ಒಂದು ಕಳಸಿಗೆ ಅಕ್ಕಿಯನ್ನು ಬೆಲೆ ಕಟ್ಟಿ ಕೊಡಿಸಿದ್ದೇನೆ ಪ್ರಭುಗಳೇ" ಎಂದನು ಹೊಸ ಕ್ರಯಾಧಿಕಾರಿ.

"ಹಾಗೇನು ? ಹೊಸ ಬಗೆಯ ಬೆಲೆಯೇ ನಿಜ. ಹಾಗಾದರೆ ಆ ಕಳಸಿಗೆ ಅಕ್ಕಿಯ ಬೆಲೆ ಎಷ್ಟಾಗುತ್ತದೆ ?" ಎಂದು ಕೇಳಿದನು ರಾಜ.

ಆಸ್ಥಾನ ಕ್ರಯಾಧಿಕಾರಿ ಕೂಡಲೇ "ಕಳಸಿಗೆ ಅಕ್ಕಿಯ ಬೆಲೆ ಘನವಾದುದೇ. ಈ ಕಾಶೀ ರಾಜ್ಯ ಮತ್ತು ಸುತ್ತು ಮುತ್ತಲಿನ ಸಾಮಂತ ರಾಜ್ಯಗಳನ್ನೂ ಕೂಡಿಸಿದರೆ ಎಷ್ಟು ಬೆಲೆಯಾಗುವುದೋ ಅಷ್ಟು !" ಎಂದನು.

ಈ ಮಾತು ಕೇಳಿದ ಕೂಡಲೇ, ಸಭೆಯಲ್ಲಿದ್ದವರೆಲ್ಲಾ ಅವಹೇಳನೆಯ ಧ್ವನಿಯನ್ನೆಬ್ಬಿಸಿ ಚಪ್ಪಾಳೆತಟ್ಟಿ, ನೆಗಾಡಲು ಪ್ರಾರಂಭಿಸಿದರು.

ನಗು ತಗ್ಗಿದ ಮೇಲೆ, ಒಬ್ಬ ಪ್ರಮುಖನು ಎದ್ದು ನಿಂತು, ಹೊಸ ಕ್ರಯಾಧಿಕಾರಿಯನ್ನು ನೋಡಿ, "ಇಷ್ಟು ಕಾಲದಿಂದ ರಾಜ್ಯಗಳಿಗೆ ಬೆಲೆಕಟ್ಟಲು ಸಾಧ್ಯವಿಲ್ಲವೆಂದು ಅಂದುಕೊಂಡಿದ್ದೆವು. ಆದರೆ ಕಾಶೀ ರಾಜ್ಯವೆಲ್ಲಾ ಕೂಡಿಸಿ ಒಂದು ಕಳಸಿಗೆ ಅಕ್ಕಿಯ ಬೆಲೆಯಷ್ಟೇ ಆಗುತ್ತದೆಂದು ಈ ಹೊಸ ಕ್ರಯಾಧಿಕಾರಿಯಿಂದ ಈಗ ತಾನೇ ಗೊತ್ತಾಯಿತು. ಆಹಾ ! ಇವನ ಬುದ್ಧಿಶಕ್ತಿ ಅದ್ಭುತವೇ ಸರಿ !" ಎಂದು ಗೇಲಿ ಮಾಡಿದನು. ಆಗ ಬೋಧಿಸತ್ವನು ಸಭೆಯಮುಂದೆ ಬಂದು, "ಈ ಕ್ರಯಾಧಿಕಾರಿ ಹೇಳಿದುದು ಪರಮ ಸತ್ಯವಾಗಿದೆ. ಇದರಲ್ಲಿ ಊಹಿಸಲಾಗದ ಸಂಗತಿ ಯಾವುದೂ ಇಲ್ಲ. ಅವನ ಬೆಲೆಯ ಮಟ್ಟದಲ್ಲೇ ಗಣಿಸಿದ್ದಾನೆ. ಐನೂರು ಕುದುರೆಗಳಿಗೆ ಒಂದು ಕಳಸಿಗೆ ಬೆಲೆಯೆಂದು ಹೇಳಿದ್ದಾನೆ. ಒಂದು ಕಳಸಿಗೆಯ ಬೆಲೆ ಕಾಶೀ ರಾಜ್ಯವೂ ಸಾಮಂತ ರಾಜ್ಯಗಳೂ ಕೂಡಿದಷ್ಟು ಅಂದಿದ್ದಾನೆ. ಅಂದರೆ ಐನೂರು ಶ್ರೇಷ್ಠ ಜಾತಿಯ ಅಮೂಲ್ಯವಾದ ಕುದುರೆಗಳಿಗೆ ಬೆಲೆ ಕಟ್ಟಲು ತನ್ನಿಂದಾಗದೆಂದೂ, ಎಷ್ಟು ಕೊಟ್ಟರೂ ಕೊಡಬಹುದೆಂದೂ, ಒಂದು ಕಳಸಿಗೆಯಲ್ಲಿರುವ ಅಕ್ಕಿಗಳಷ್ಟು ನಾಣ್ಯಗಳೆಂದೂ ಅರ್ಥವಾಗುತ್ತದೆ. ಇದರಿಂದ ಕ್ರಯಾಧಿಕಾರಿ ಕಟ್ಟಿದ ಬೆಲೆ ನ್ಯಾಯವಾಗಿಯೇ ಇರುವಂತೆ ಕಾಣುತ್ತದೆ" ಎಂದನು.

ಬೋಧಿಸತ್ವನ ಮಾತುಗಳಿಗೆ ಎಲ್ಲರೂ ತಲೆದೂಗಿದರು. ಆಗಲೇ ಕಾಶೀ ರಾಜನಿಗೂ ತಾನು ಮಾಡಿದ ತಪ್ಪು ಗೊತ್ತಾಯಿತು. ಏನೂ ತಿಳಿಯದವನನ್ನು ಕ್ರಯಾಧಿಕಾರಿ ಪದವಿಯಲ್ಲಿಟ್ಟುದು ತನ್ನದೇ ತಪ್ಪು ಎಂದುಕೊಂಡು ಅವನನ್ನು ತೊಲಗಿಸಿದನು. ಬೋಧಿಸತ್ವನೇ ಮತ್ತೆ ಆ ಪದವಿಗೆ ಬಂದನು. ಅಶ್ವವರ್ತಕನಿಗೂ ಸರಿಯಾದ ಬೆಲೆ ಸಿಕ್ಕಿತು.





# ಬುದ್ಧನ ನಿರ್ವಾಣ

ಸಾರಿ ಪುತ್ರ ಮತ್ತು ಮೌದ್ಗಲ್ಯಾಯನ ಎಂಬಿಬ್ಬರು ಬುದ್ಧನಿಗೆ ಸಮರ್ಥರಾದ ಶಿಷ್ಯರಾಗಿದ್ದರು. ಬುದ್ಧನು ಅವರಿಬ್ಬರನ್ನೂ ಬೌದ್ಧ ಧರ್ಮ ಪ್ರಚಾರಕ್ಕಾಗಿ ನಿಯಮಿಸಿದನು. ಅವರಿಬ್ಬರೂ ಬೇರೆ ಬೇರೆ ಪ್ರಾಂತಗಳಲ್ಲಿ ತಮ್ಮ ವಾಸವನ್ನು ಏರ್ಪಡಿಸಿಕೊಂಡರು.

ಕೆಲವು ವರ್ಷಗಳ ಮೇಲೆ ಸಾರಿ ಪುತ್ರನು ತನ್ನ ನಿರ್ವಾಣದ ವೇಳೆ ಬಂದಿತೆಂದು ತಿಳಿದು, ಬುದ್ಧನ ದರ್ಶನ ಪಡೆದನು. ಬುದ್ಧನ ಆಶೀರ್ವಾದ ಪಡೆದು ಅವನು ತನ್ನ ತಾಯಿಯ ಬಳಿಗೆ ಹೋಗಿ, ಅವಳು ಬುದ್ಧ ಮತವನ್ನು ಸ್ವೀಕರಿಸುವಂತೆ ಮಾಡಿ, ಒಂದು ದಿನ ಬೆಳಗ್ಗಿನ ಹೊತ್ತಿನಲ್ಲಿ ನಿರ್ವಾಣ ಹೊಂದಿದನು.





ಮೌದ್ಗಲ್ಯಾಯನನ ಬೋಧನೆಗಳು ಮತ ದುರಹಂಕಾರಿಗಳಾದ ಕೆಲವರನ್ನು ಕೋಪಕ್ಕೆ ಗುರಿ ಮಾಡಿದುವು. ಅವರು ಅವನನ್ನು ಕೊಲ್ಲಲು ಒಬ್ಬ ದುಷ್ಟನನ್ನು ನಿಯಮಿಸಿದರು. ಆದರೆ ಅವನು ಮೌದ್ಗಲ್ಯಾಯನನ ಕುಟೀರವನ್ನು ಪ್ರವೇಶಿಸುವಾಗ, ಮೌದ್ಗಲ್ಯಾಯನನು ಗಾಳಿಯಲ್ಲಿ ತೇಲುತ್ತಾ ಆಕಾಶವನ್ನೇರಿದನು.



ಈ ವಿಧವಾಗಿ ಮೌದ್ಸಲ್ಯಾಯನನು ತನ್ನನ್ನು ಕೊಲ್ಲಲು ಬಂದವರಿಗೆ ಸಿಕ್ಕದೆ ತನ್ನನ್ನು ತಾನೇ ಕಾಪಾಡಿಕೊಂಡನು. ಆಗ ಒಂದು ದಿನ ಹಂತಕನೊಬ್ಬನು ದೊಣ್ಣೆಯೊಂದನ್ನು ಎತ್ತಿಕೊಂಡು ಕುಟೀರದೊಳಗೆ ಪ್ರವೇಶಿಸುತ್ತಿರಲು, ಅಕಸ್ಮಾತ್ತಾಗಿ ಮೌದ್ಗಲ್ಯಾಯನನಿಗೆ ತನ್ನ ಪೂರ್ವಜನ್ಮಕ್ಕೆ ಸಂಬಂಧಿಸಿದ ಒಂದು ಘಟನೆ ನೆನಪಿಗೆ ಬಂದಿತು.

ಪೂರ್ವ ಜನ್ಮದಲ್ಲಿ ಅವನು ತನ್ನ ವೃದ್ಧ ಮಾತಾಪಿತರಿಂದ ಬಿಡುಗಡೆಹೊಂದಲು ಅವರನ್ನು ಕಾಡಿಗೆ ಕರೆದುಕೊಂಡು ಹೋದನು. ಅಲ್ಲಿ ಅವರು ಒಂದು ಮರದ ನೆರಳಿನಲ್ಲಿ ಕುಳಿತಿದ್ದಾಗ, ತಾನು ಉದ್ದುದ್ದವಾದ ಗಡ್ಡ ಮೀಸೆಗಳನ್ನು ಅಂಟಿಸಿಕೊಂಡು ಅವರನ್ನು ಕೊಲ್ಲಲು ನೋಡಿದನು. ಆಗ ಅವರು "ಅಪ್ಪಾ ಮಗನೇ! ನಮ್ಮನ್ನು ಯಾರೋ ಕೊಲ್ಲಲು ಬಂದಿದ್ದಾರೆ. ನೀನು ಓಡಿ ಹೋಗಿ ಪ್ರಾಣ ಕಾಪಾಡಿಕೋಪ್ಪಾ!" ಎಂದು ಗಟ್ಟಿಯಾಗಿ ಕೂಗಿದರು. ತನ್ನ ರಕ್ಷಣೆಗಾಗಿ ತಂದೆ ತಾಯಿಗಳಿಗಿರುವ ಎಚ್ಚರಿಕೆಯನ್ನು ನೋಡಿ, ಅವನ ಹೃದಯವು ಪರಿವರ್ತನೆಗೊಂಡಿತು.





ಅವನು ಕೂಡಲೇ ದೂರ ಹೋಗಿ ಗಡ್ಡ ಮೀಸೆಗಳನ್ನು ತೆಗೆದು ಹಾಕಿ, ತಂದೆತಾಯಿಗಳನ್ನು ಮನೆಗೆ ಕರೆದುಕೊಂಡು ಬಂದನು. ಈ ಪೂರ್ವಜನ್ಮದ ಪಾಪ ಕಾರ್ಯವು ನೆನಪಿಗೆ ಬಂದ ಕೂಡಲೇ ಮೌದ್ಗಲ್ಯಾಯನನಿಗಿದ್ದ ಅದ್ಭುತಶಕ್ತಿ ನಶಿಸಿತು. ಹಂತಕನು ಅವನನ್ನು ದೊಣ್ಣೆಯಿಂದ ಹೊಡೆದು ಸತ್ತನೆಂದುಕೊಂಡು ಹೊರಟು ಹೋದನು. ಆದರೆ ಮೌದ್ಗಲ್ಯಾಯನನು ಕೊನೆಯುಸಿರಿಸಿಂದ ಬುದ್ಧನ ಬಳಿಗೆ ಹೋಗಿ ಅವನ ಪಾದಗಳ ಮುಂದೆ ಪ್ರಾಣಬಿಟ್ಟನು.

ಈಗ ಎಂಬತ್ತು ವರ್ಷ ವಯಸ್ಸಾದ ಬುದ್ಧನು, ಒಂದು ದಿನ ವೈಶಾಲೀ ನಗರಕ್ಕೆ ಹೋದನು. ಅತ್ಯಂತ ಸುಂದರಿಯಾದ ರಾಜನರ್ತಕಿ ಅಂಬಾ ಪಾಲಿ ಅವನನ್ನು ನೋಡಲು ಬಂದಳು. ಅವಳು ಬುದ್ಧನಿಗೂ ಅವನ ಶಿಷ್ಯರಿಗೂ ಉದ್ಯಾನವನ ದಲ್ಲಿ ಬಿಡದಿಗಳನ್ನು ಏರ್ಪಡಿಸಿ, ಭೋಜನಕ್ಕೆ ತನ್ನ ಮನೆಗೆ ಬರಬೇಕೆಂದು ಆಹ್ವಾನಿಸಿದಳು. ಬುದ್ಧನು ಒಪ್ಪಿದನು.






ಈ ಸಂಗತಿ ನಡೆದ ಮರುಕ್ಷಣದಲ್ಲಿ ಕೆಲಮಂದಿ ಕುಲೀನರು ಬುದ್ಧನ ದರ್ಶನಕ್ಕೆ ಬಂದು ತಮ್ಮೊಂದಿಗೆ ಊಟ ಮಾಡಬೇಕೆಂದು ಕೇಳಿ ಕೊಂಡರು. ಅವನು ರಾಜನರ್ತಕಿಯ ಮನೆಯಲ್ಲಿ ಊಟಕ್ಕೆ ಒಪ್ಪಿಕೊಂಡುದರಲ್ಲಿ ತಪ್ಪು ಹಿಡಿದರು. ಬುದ್ಧನು ಅವರನ್ನು ಕುರಿತು, " ಗಂಗಾಕೃಷ್ಣಾ ನದಿಗಳು ಬೇರೆ ಬೇರೆಯಾದರೂ, ಒಮ್ಮೆ ಅವು ಸಮುದ್ರದಲ್ಲಿ ಕಲೆತಮೇಲೆ ತಮ್ಮ ಭಿನ್ನತೆ ಯನ್ನು ಕಳೆದುಕೊಳ್ಳುತ್ತವೆ. ನನ್ನ ಬೋಧನೆ ಯನ್ನು ಅಂಗೀಕರಿಸಿದ ನರ್ತಕಿಯರಾದರೂ ಕುಲೀನರಾದರೂ ಸಹ ಒಂದೇ " ಎಂದನು.

ತರುವಾಯ ಒಂದಾನೊಂದು ದಿನ ಬುದ್ಧನು ತನ್ನ ಶಿಷ್ಯರನ್ನೆಲ್ಲಾ ಕರೆದು ತಾನು ಇನ್ನು ಮೂರು ತಿಂಗಳಲ್ಲಿ ನಿರ್ವಾಣ ಹೊಂದುವೆನೆಂದು ಹೇಳಿದನು. ಅದನ್ನು ಕೇಳಿ ದುಃಖಿಸುವ ಶಿಷ್ಯರಿಗೆ ಬುದ್ಧನು ಧೈರ್ಯ ಹೇಳಿ, " ಎಂಥವರಿಗಾದರೂ ಮರಣವು ತಪ್ಪದು. ಇನ್ನು ಮೇಲೆ ನನ್ನ ಬೋಧನೆಗಳೇ ನಿಮಗೆ ಮಾರ್ಗದರ್ಶಕಗಳು " ಎಂದನು.





ಬುದ್ಧನು ವೈಶಾಲಿಯಿಂದ ಹೊರಟು ಪಾವಾ ನಗರಕ್ಕೆ ಹೋದನು. ಅಲ್ಲಿ ಅವನ ಶಿಷ್ಯನಾದ ಚುಂಡನೆಂಬ ಕುಂಬಾರನು ಬುದ್ಧನಿಗೆ ಆತಿಥ ವಿತ್ತನು. ಅವನು ಅತ್ಯಂತ ಭಕ್ತಿಯಿಂದ ಬುದ್ಧನಿಗೆ ಮಾಂಸದ ಅಡಿಗೆಯನ್ನು ಬಡಿಸಿದನು. ಮಾಂಸ ಭೋಜನವು ತನಗೆ ಕೇಡುಮಾಡುವುದೆಂದು ತಿಳಿದೂ, ಶಿಷ್ಯನ ಮೇಲಿನ ಪ್ರೇಮದಿಂದ, ಬುದ್ಧನು ಅದನ್ನು ನಿರಾಕರಿಸಲಾಗದೆ ಸ್ವೀಕರಿಸಿದನು.

ಊಟದ ಅನಂತರ ಬುದ್ಧನಿಗೆ ಆರೋಗ್ಯ ಕೆಟ್ಟಿತು. ತನ್ನ ನಿರ್ವಾಣ ಕಾಲ ಸಮೀಪಿಸಿತೆಂದು ಅವನು ಶಿಷ್ಯರಿಗೆ ಹೇಳಿದನು. ಬುದ್ಧನ ಕೊನೆಯ ದರ್ಶನಕ್ಕಾಗಿ ಜನರು ಗುಂಪು ಗುಂಪಾಗಿ ಕೂಡಿ ದರು. ಅಂತಹ ರೋಗ ಪರಿಸ್ಥಿತಿಯಲ್ಲಿಯೂ ಬುದ್ಧನು ಕೇಳಿದವರ ಪ್ರಶ್ನೆಗಳಿಗೂ, ಧರ್ಮ ಸಂದೇಹಗಳಿಗೂ ಉತ್ತರ ಕೊಡುತ್ತಾ, ಕಟ್ಟ ಕಡೆಗೆ ಪ್ರಶಾಂತವಾಗಿ ಕಣ್ಣು ಮುಚ್ಚಿದನು.





ಬುದ್ಧನ ಧರ್ಮ ಬೋಧನೆಗಳು ಹತ್ತು ದಿಕ್ಕು ಗಳಲ್ಲಿಯೂ ವ್ಯಾಪಿಸಿದುವು. ಆತನ ಹೆಸರಿನ ಸ್ತೂಪಗಳೂ, ಭಿಕ್ಷು ವಿಹಾರಗಳೂ ಭಾರತ ದೇಶದಲ್ಲಿ ಕೂಡಾ ಸ್ಥಾಪಿಸಲ್ಪಟ್ಟುವು. ಆತನ ಧರ್ಮ ಬೋಧನೆಗಳ ಮೇಲೆ ಅಸಂಖ್ಯ ಕಾವ್ಯ ಗಳೂ ನಾಟಕಗಳೂ, ಸಮೀಕ್ಷಾ ಗ್ರಂಥಗಳೂ ಹೊರಬಿದ್ದುವು. ಬೌದ್ಧ ಮತವು ಪ್ರಪಂಚದ ಮುಖ್ಯ ಮತಗಳಲ್ಲಿ ಒಂದಾಗಿ ಸ್ಥಿರಪಟ್ಟಿತು.



# ಕೋಪೋಗ್ರತೆ

ಹಿಂದೆ ಉಗ್ರಸೇನನೆಂಬ ಮಹಾರಾಜನೊಬ್ಬನಿದ್ದ. ಹೆಸರಿಗೆ ತಕ್ಕಂತೆ ಮಹಾ ಕೋಪೋಗ್ರ ಗುಣದವನು. ಅವನು ಯುವರಾಜನಾಗಿದ್ದಾಗ ಅದರಿಂದೇನೂ ತೊಂದರೆಯಿಲ್ಲದೆ ಇದ್ದರೂ, ರಾಜನಾದ ಕ್ಷಣದಿಂದ ಅವನ ಕೋಪವು ಬಹಳ ಅನರ್ಥಗಳಿಗೆ ದಾರಿ ತೆಗೆಯಿತು.

ತನ್ನ ಕೋಪವನ್ನು ಹತೋಟಿಯಲ್ಲಿಟ್ಟುಕೊಳ್ಳಲು ಉಗ್ರಸೇನನು ಶತವಿಧವಾಗಿ ಪ್ರಯತ್ನಿಸಿದನು. ಆದರೂ ಕೋಪ ಬಂದ ಕೂಡಲೇ ಅವನಿಗೆ ಮತಿ ಮರೆವು ಬಂದು ಬಹಳ ಕ್ರೂರವಾಗಿ ಪ್ರವರ್ತಿಸುತ್ತಿದ್ದನು. ಎಲ್ಲರೂ ಹೆದರಿ ನಡುಗಬೇಕಾಗುತ್ತಿತ್ತು. ಆದರೆ ಕೋಪ ತಗ್ಗಿದ ಮೇಲೆ ಅವನಿಗಿಂತ ಒಳ್ಳೆಯವರು ಯಾರೂ ಇಲ್ಲವೆನಿಸುತ್ತಿತ್ತು.

ಒಂದು ಸಾರಿ ಅವನಿಗೆ ಒಬ್ಬ ಭಟನ ಮೇಲೆ ಕೋಪ ಬಂದಿತು. ಕೂಡಲೇ ಅವನಿಗೆ ಇಪ್ಪತ್ತೈದು ಛಡಿಗಳ ಶಿಕ್ಷೆಯನ್ನು ವಿಧಿಸಿಬಿಟ್ಟನು. ಆ ಭಟನು ಪೆಟ್ಟು ತಿಂದು ಬವಳಿ ಬಂದು ಬಿದ್ದ ಮೇಲೆ ರಾಜನ ಕೋಪವು ತಗ್ಗಿತು. ಹೀಗಾದುದಕ್ಕೆ ತುಂಬಾ ನೊಂದುಕೊಂಡು ತನ್ನನ್ನು ಮನಸ್ಸಿನಲ್ಲೇನಿಂದಿಸಿಕೊಳ್ಳುತ್ತ, ಭಟನ ಗಾಯಗಳಿಗೆ ಚಿಕಿತ್ಸೆ ಮಾಡಿಸಿ, ರಾಣಿಯ ಬಳಿ ಹೋಗಿ, ತಾನು ಮಾಡಿದ ಕಾರ್ಯಕ್ಕೆ ತುಂಬಾ ಪಶ್ಚಾತ್ತಾಪವನ್ನು ಪ್ರಕಟಿಸಿದನು.

"ಹೌದು. ಆ ಭಟನು ಮಾಡಿದ್ದು ಮನುಷ್ಯ ಸಹಜವಾದ ಸಣ್ಣದೊಂದು ಮರೆವಿನ ತಪ್ಪು. ಅದಕ್ಕೆ ಅವನು ಮೂರ್ಛೆ ಬೀಳುವ ಹಾಗೆ ಹೊಡೆಸುವುದೆಂದರೇನು ? ನಿಮಗಿರುವ ಇಂಥಾ ಕೋಪವು ದೇಶಕ್ಕೇ ಒಳ್ಳೆಯದಲ್ಲವೆನಿಸುತ್ತದೆ. ಇದು ಬಹಳ ಭಯಂಕರವಾದ ಹಾಳು ರಾಕ್ಷಸ ಗುಣವಲ್ಲದೆ ಮತ್ತೇನು ?" ಎಂದಳು ರಾಣಿ.

"ನಾನೇನು ಮಾಡಲಿ ? ಕೋಪವನ್ನು ತಡೆದುಕೊಳ್ಳಬೇಕೆಂತಲೇ ಪ್ರಯತ್ನಿಸುತ್ತೇನೆ. ಸಾಧ್ಯವಾಗದೆ ಹೋಗುತ್ತದೆ. ಒಮ್ಮೆಗೇ ದುದುಕಿಬಿಡುತ್ತೇನೆ." ಎಂದನು ಉಗ್ರಸೇನ.

"ನಾನೊಂದು ಉಪಾಯ ಹೇಳುತ್ತೇನೆ, ಹಾಗೆ ಮಾಡಿ. ಇನ್ನು ಮೇಲೆ ನಿಮಗೆ ಕೋಪ ಬಂದ ಕೂಡಲೇ, ಇನ್ನೊಬ್ಬನಿಗೆ ಏನು ಶಿಕ್ಷೆ ವಿಧಿಸುವಿರೋ ಅದೇ ಶಿಕ್ಷೆಯನ್ನು ಆಮೇಲೆ ನೀವೂ ಅನುಭವಿಸಿರಿ" ಎಂದಳು ರಾಣಿ.



ರಾಜನು ಹಾಗೇ ಮಾಡುವೆನೆಂದು ಒಪ್ಪಿದ ಮೇಲೆ, ನಾಲ್ಕೈದು ದಿನಗಳಲ್ಲಿ ಉಗ್ರಸೇನನು ಒಬ್ಬ ಭಟನ ಮೇಲೆ ಕೋಪಿಸಿ ಇಪ್ಪತ್ತೈದು ಛಡಿಯೇಟು ಶಿಕ್ಷೆ ವಿಧಿಸಿದನು. ಶಿಕ್ಷೆ ಅಮಲುಗೊಳಿಸಿದ ಮೇಲೆ ಅವನ ಕೋಪ ತಣಿಯಿತು. ಆಗ ರಾಣಿಗೆ ಹೇಳಿದ ಮಾತು ನೆನಪಿಗೆ ಬಂದು, "ಚಿಕ್ಕ ತಪ್ಪಿಗೆ ಇಪ್ಪತ್ತೈದು ಛಡಿಯೇಟುಗಳ ಶಿಕ್ಷೆ ಕೊಡಿಸಿದ್ದು ತಪ್ಪು. ಈ ತಪ್ಪು ಮಾಡಿದ್ದಕ್ಕೆ ನಾನೂ ಶಿಕ್ಷೆ ಅನುಭವಿಸುತ್ತೇನೆ. ಲೋ ಭಟಾ ! ನನಗೆ ಲೆಕ್ಕಮಾಡಿ ಇಪ್ಪತ್ತೈದು ಛಡಿಯೇಟುಗಳನ್ನು ಸರಿಯಾಗಿ ಕೊಡು" ಎಂದನು ಉಗ್ರಸೇನ. ಅಲ್ಲಿದ್ದ ಭಟರಲ್ಲಿ ಯಾವನೂ ರಾಜನನ್ನು ಹೊಡೆಯಲು ಮುಂದೆ ಬರಲಿಲ್ಲ. ರಾಜನು ಶಾಸನ ಮಾಡಿದರೂ ಭಟರು ಕದಲಲಿಲ್ಲ.

ಉಗ್ರಸೇನನು ರಾಣಿಯ ಬಳಿಗೆ ಹೋಗಿ ನಡೆದು ಹೋದ ಸಂಗತಿಯನ್ನು ಹೇಳಿದನು. ಅದನ್ನು ಕೇಳಿ ರಾಣಿ ನಸುನಕ್ಕು, "ಭಟನು ಸಣ್ಣ ತಪ್ಪು ಮಾಡಿದ್ದಕ್ಕೆ ಇಪ್ಪತ್ತೈದು ಛಡಿ ಕೊಡಿಸಿದಿರಿ. ಈಗ ರಾಜನ ಶಾಸನವನ್ನು ಪಾಲಿಸದಿರುವುದು ದೊಡ್ಡ ತಪ್ಪಾಯಿತಲ್ಲ? ಅಷ್ಟು ದೊಡ್ಡ ತಪ್ಪು ಮಾಡಿದ ಭಟರ ಮೇಲೆ ನಿಮಗೆ ಸಿಟ್ಟು ಬರಲಿಲ್ಲ. ಅಂದರೆ ಶಿಕ್ಷೆ ಅನುಭವಿಸಬೇಕೆಂಬ ಬಯಕೆ ನಿಮಗೆ ಇಲ್ಲವೇ ಇಲ್ಲವೆಂದಾಯಿತು !" ಎಂದಳು

ಈ ಮಾತು ಉಗ್ರಸೇನನ ಅಹಂಕಾರಕ್ಕೆ ಪೆಟ್ಟು ಬಿದ್ದಂತಾಯಿತು.

"ನನ್ನನ್ನು ಹೊಡೆಯಲಿಲ್ಲವೆಂಬ ತಪ್ಪಿಗೆ ನನ್ನ ಭಟರನ್ನು ಹೇಗೆ ಶಿಕ್ಷಿಸಲಿ ? ನಿನ್ನಿಂದಾದರೆ ನೀನು ಆ ಶಿಕ್ಷೆಯನ್ನು ಅಮಲುಗೊಳಿಸು" ಎಂದನು ರಾಜ.

ರಾಣಿ ಕೂಡಲೇ ಒಬ್ಬ ಭಟನನ್ನು ಕರೆದು, "ನಾನು ಹೇಳಿದ್ದನ್ನು ಮಾಡುವಿಯಾ ? ಇಲ್ಲಾ ತತ್ಕ್ಷಣವೇ ಸಾಯುವೆಯಾ ?" ಎಂದು ಕೇಳಿದಳು.

ಭಟನು ಹೆದರಿ ನಡುಗಿ ರಾಣಿಯ ಆಜ್ಞೆಯನ್ನು ಪಾಲಿಸುವೆನೆಂದನು.

ರಾಣಿ ಅವನ ಕೈಗೆ ಕೊರಡೆಯನ್ನು ಕೊಟ್ಟು ರಾಜನಿಗೆ ಇಪ್ಪತ್ತೈದು ಏಟು ಕೊಡಲು ಹೇಳಿದಳು. ಭಟನು ಅದಕ್ಕೆ ಸಿದ್ಧನಾಗಿ ರಾಜನನ್ನು ಹೊಡೆದನು.

ಛಟೀರೆಂದು ಬಿದ್ದ ಮೊದಲನೇ ಏಟಿಗೆ ರಾಜನ ಸರ್ವಾಂಗವೂ ಛುರ್ರೆಂದಿತು. ಎರಡನೇ ಏಟು ಬೀಳುವುದರೊಳಗೆ ರಾಜನು ತಿರುಗಿ ಬಿದ್ದು, ಭಟನ ಕೈಯಿಂದ ಕೊರಡೆಯನ್ನು ಸೆಳೆದುಕೊಂಡು, ಅವನಿಗೆ ಹತ್ತೇಟುಗಳನ್ನು ಛಡಛಡನೆ ಕೊಟ್ಟನು. ರಾಣಿ ಏನೋ ಹೇಳಲು ನೋಡಿದಳು. ಅದನ್ನು ಕೇಳಿಸಿಕೊಳ್ಳದೆ ರಾಜನು ಸರಸರನೆ ಮಂತ್ರಿಯ ಬಳಿಗೆ ಹೋಗಿ, "ಮಂತ್ರೀ, ರಾಣಿ ರಾಜದ್ರೋಹಕ್ಕೆ ತಲೆ ಹಾಕಿದಳು. ಅವಳಿಗೆ ದೇಶ ಬಹಿಷ್ಕರಣ ಶಿಕ್ಷೆ ವಿಧಿಸಿದ್ದೇನೆ. ಅದನ್ನು ಕೂಡಲೇ ಅಮಲುಪಡಿಸದೆ ಹೋದ ಪಕ್ಷಕ್ಕೆ ನೀನು ಕೂಡಾ ರಾಜದ್ರೋಹಿಯೆಂದು ತಿಳಿಯಲ್ಪಡುವಿ !" ಎಂದನು.

ಗತ್ಯಂತರವಿಲ್ಲದೆ ಮಂತ್ರಿ ರಾಣಿಯನ್ನು ಕರೆದು ಕೊಂಡು ಹೋಗಿ ಅರಣ್ಯದಲ್ಲಿ ಬಿಟ್ಟು ಬಂದನು. ಅಷ್ಟರಲ್ಲಿ ರಾಜನ ಕೋಪವು ತಗ್ಗಿ ಪಶ್ಚಾತ್ತಾಪ ಪಡುತ್ತ, ರಾಣಿಯನ್ನು ಮತ್ತೆ ಅರಮನೆಗೆ ತರಿಸಿ ಕೊಂಡನು. ಆಮೇಲೆ ರಾಣಿಯೊಂದಿಗೆ ತುಂಬಾ ಕ್ಷಮಾಪಣೆ ಕೇಳಿಕೊಂಡನು.

"ನಾನು ಹೇಳಿದ ಉಪಾಯದಿಂದ ತಾನೇ ಹೀಗಾಯಿತು ? ಅದು ಹೋಗಲಿ, ನೀವು ಕ್ಷಮಿಸುವು ದಾದರೆ ಇನ್ನೊಂದು ಉಪಾಯ ಹೇಳುತ್ತೇನೆ. ನೀವು ಕೋಪೋದ್ರೇಕದಿಂದ ಕೊಡುವ ಶಿಕ್ಷೆಯನ್ನು ಕೂಡಲೇ ಅಮಲುಪಡಿಸಲಾಗದೆಂದು ಶಾಸನ ಮಾಡಿ ಬಿಡಿ, ಅಷ್ಟರೊಳಗೆ ನಿಮ್ಮ ಕೋಪ ತಗ್ಗುತ್ತದಷ್ಟೇ ? ಕೋಪ ತಗ್ಗಿದ ಮೇಲೆ ನಿಮ್ಮಷ್ಟು ಒಳ್ಳೆಯವರು ಯಾರಿದ್ದಾರೆ ?" ಎಂದಳು ರಾಣಿ.

ರಾಜನು ತನ್ನ ಕೆಳಗಿನ ಉದ್ಯೋಗಸ್ಥರಿಗೂ ಭಟರಿಗೂ ಹಾಗೆಯೇ ಹೇಳಿ ಶಾಸನ ಮಾಡಿದನು.

ಆದರೆ ಈ ಉಪಾಯ ಕೂಡಾ ಫಲಿಸಲಿಲ್ಲ! ತಾನು ವಿಧಿಸಿದ ಶಿಕ್ಷೆಯನ್ನು ಕೂಡಲೇ ಅಮಲು ಗೊಳಿಸದಿರುವ ವ್ಯಕ್ತಿಗಳ ಮೇಲೆ ಕೂಡಾ ಅವನಿಗೆ ಸಿಟ್ಟು ಬರುತ್ತಿತ್ತು. ಅಷ್ಟು ಮಾತ್ರವಲ್ಲದೆ ಅವರಿಗೂ ಶಿಕ್ಷೆ ವಿಧಿಸಿ ಅದೂ ತಡವಾದಂತೆ ಅವನ ಕೋಪ ಹೆಚ್ಚುತ್ತಾ ಹೋಗುತ್ತಿತ್ತು. ಆಮೇಲೆ ತನ್ನ ಮೈಯನ್ನು ತಾನೇ ಪರಚಿಕೊಂಡು ಹೇಗೋ ಶಾಂತನಾಗುತ್ತಿದ್ದನು.

ಈ ಬಗೆಯ ತನ್ನ ಕೋಪವನ್ನು ಕುರಿತು ಪ್ರಜೆಗಳು ಏನು ಅಂದುಕೊಳ್ಳುವರೋ ತಿಳಿಯಬೇಕೆಂದು ಅವನಿಗೆ ತೋರಿತು. ಅದಕ್ಕಾಗಿ ಒಮ್ಮೆ ಮಾರು ವೇಷದಲ್ಲಿ ದೇಶದೊಳಗೆ ತಿರುಗಾಡಿದನು.

ಆಗ ಒಂದು ಕಡೆಯಲ್ಲಿ ತನಗಿಂತಲೂ ಹೆಚ್ಚು ಕೋಪವುಳ್ಳ ಒಬ್ಬನೊಡನೆ ಮಾತು ತಗಲಿತು. ಅವನು ಯಾವ ಕಾರಣವೂ ಇಲ್ಲದೆ, ರಾಜನೊಡನೆ ಮಾತು ತೆಗೆದು ಜಗಳಕ್ಕೇ ಬಂದುಬಿಟ್ಟ ! ರಾಜನಿಗೂ ಬಂತು ಕೋಪ !



ಸುತ್ತುಮುತ್ತಲಿನವರು ರಾಜನನ್ನು ಶಾಂತ ಪಡಿಸುತ್ತ "ಸುಮ್ಮನಿರು, ಅಪ್ಪಾ, ಇವನು ಅಸಲೇ ಕೋಪಿಷ್ಠ ದೂರ್ವಾಸ. ಕೋಪ ಬಂದರೆ ಮಹಾ ರಾಜನನ್ನೂ ಲೆಕ್ಕಿಸಲಾರ !" ಎಂದರು.

"ಏಕೆ ಲೆಕ್ಕಿಸಲಾರ ? ನಾನೇ ಮಹಾರಾಜ ! ಇವನು ಈಗ ನನ್ನ ಕಾಲಿಗೆ ಬೀಳದೆ ಹೋದರೆ ಇವನಿಗೆ ಐವತ್ತು ಛಡಿ ಕೊಡಿಸುತ್ತೇನೆ" ಎಂದು ಉಗ್ರಸೇನ ರಾಜನು ತನ್ನ ಛದ್ಮ ವೇಷವನ್ನು ತೊಲಗಿಸಿ ನಿಂತನು.

ಅವನು ಮಹಾರಾಜನೆಂದು ತಿಳಿದರೂ ಆ ಮುಂಗೋಪಿ ತನ್ನ ಧೋರಣೆಯನ್ನು ಬಿಡದೆ "ರಾಜನಾದರೇನು ದೊಡ್ಡ ಇವನೇ ? ಮನುಷ್ಯ ತಾನೆ ? ತಪ್ಪು ಅವನದೇ. ಅವನೇ ಹಿಡಿಯಲಿ ನನ್ನ ಕಾಲು !" ಎಂದನು.

ಉಗ್ರಸೇನನು ಮಹಾಕೋಪದಿಂದ ಕೈ ತಟ್ಟಿದನು. ಕೂಡಲೇ ಮಾರು ವೇಷದ ಭಟರು ಬಂದರು. ಮುಂಗೋಪದ ಮನುಷ್ಯ ಛಡಿಯೇಟುಗಳ ಶಿಕ್ಷೆಯನ್ನು ಅನುಭವಿಸಿ ಬಿದ್ದನು. ಛಡಿ ತಿನ್ನುತ್ತ ಬಿದ್ದರೂ ಸಹ ಅವನು ರಾಜನನ್ನು ಬಯ್ಯುತ್ತಲೇ ಇದ್ದನು. ಅಂತಹ ಮೂರ್ಖನಿಗೆ ಅಷ್ಟೊಂದು ಕಠಿಣ ಶಿಕ್ಷೆ ವಿಧಿಸಿದ ರಾಜನನ್ನು ಎಲ್ಲರೂ ಮನಸ್ಸಿನಲ್ಲೇ ನಿಂದಿಸಿದರು. ಕೋಪ ತಗ್ಗಿದ ಮೇಲೆ ರಾಜನು ರಾಣಿಯೊಂದಿಗೆ ಆ ವಿಷಯವನ್ನು ಹೇಳುತ್ತ, "ನನ್ನ ಪ್ರಜೆಗಳಲ್ಲಿ ನನ್ನನ್ನು ಮೀರಿಸುವ ಕೋಪಿಷ್ಠರಿದ್ದಾರೆ. ಸಾಯುವ ಹಾಗೆ ಏಟು ತಿನ್ನುತ್ತಿದ್ದರೂ ಕೋಪವನ್ನು ಬಿಡದವರು ಇರುವಾಗ ನನ್ನ ಕೋಪವನ್ನು ಕುರಿತು ನಾನೇಕೆ ಚಿಂತಿಸಲಿ ?" ಎಂದನು.

ರಾಣಿ ಒಪ್ಪಲಿಲ್ಲ. "ಸಾಮಾನ್ಯನ ಕೋಪವು ಅವನಿಗೇ ಕಷ್ಟವನ್ನು ತರುತ್ತದೆ. ರಾಜನ ಕೋಪವು ರಾಜನಿಗಿಂತಲೂ ಪ್ರಜೆಗಳಿಗೇ ಹೆಚ್ಚಿನ ನಷ್ಟವನ್ನುಂಟು ಮಾಡುತ್ತದೆ. ಇಷ್ಟೊಂದು ಕೋಪವಿರುವ ನಿಮಗೆ ರಾಜ್ಯವಾಳುವ ಅರ್ಹತೆಯಾದರೂ ಎಲ್ಲಿದೆ ? ಪ್ರಜೆಗಳ ಕ್ಷೇಮವನ್ನು ಬಯಸುವವರಾದರೆ ರಾಜ್ಯ ನನಗೊಪ್ಪಿಸಿ ನೀವು ಸಾಮಾನ್ಯರ ಹಾಗೆ ಇದ್ದು ಬಿಡಬೇಕು" ಎಂದಳು.

ರಾಜನು ಇದಕ್ಕೆ ಒಪ್ಪಿದನು. ಅಧಿಕಾರವು ರಾಣಿಯ ಕೈಗೆ ಬಂದ ಮೇಲೆ ಕ್ರಮವಾಗಿ ರಾಜನ ಕೋಪವು ತಗ್ಗುತ್ತಾ ಹೋಯಿತು. ಅಧಿಕಾರವಿಲ್ಲದಿದ್ದರೆ ತನ್ನ ಕೋಪವು ಆಳತೆಯೊಳಗೇ ಮುದುಡಿ ಕೊಳ್ಳುತ್ತದೆಂದು ರಾಜನಿಗೆ ಬೇಗದಲ್ಲೇ ಅರ್ಥವಾಯಿತು. ಏಕೆಂದರೆ ಅವನ ಕೋಪಕ್ಕೆ ಚಾಲನೆ ಕೊಡುತ್ತಾ ಇದ್ದುದು ಅವನಿಗಿರುವ ದಂಡಿಸುವ ಹಕ್ಕು. ಹೀಗೆ ಅಧಿಕಾರಕ್ಕೂ ಕೋಪಕ್ಕೂ ನಂಟುತನವೆಂಬುದು ಈಗ ಗೊತ್ತಾಯಿತು ಆ ರಾಜನಿಗೆ.



# ಒಳಿತಿಗೆ ಒಳಿತು

ಕಾವಮ್ಮನಿಗೆ ನಾಲ್ವರು ಗಂಡು ಮಕ್ಕಳು. ಅವಳ ತಂಗಿ ತೀರಿ ಹೋದ ಮೇಲೆ ಅನಾಥನಾದ ಆ ತಂಗಿಯ ಮಗ ವಿನಯನನ್ನು ಕೂಡಾ ಕಾವಮ್ಮ ತನ್ನೊಂದಿಗೆ ಐದನೇ ಮಗನಾಗಿ ಪೋಷಿಸಿ ಬೆಳೆಸಿದಳು. ಆ ಮಕ್ಕಳಿಗೆಲ್ಲಾ ಯುಕ್ತವಯಸ್ಸು ಬಂತು. ವಿನಯನು ತನ್ನ ಸ್ವಂತ ಊರಿಗೆ ಹೋಗಿ ತನಗಿದ್ದ ಸ್ವಲ್ಪ ಪಿತ್ರಾರ್ಜಿತ ಭೂಮಿಯಲ್ಲಿ ವ್ಯವಸಾಯ ಮಾಡಿಕೊಂಡು ಬದುಕಿಕೊಂಡಿದ್ದನು.

ಕಾವಮ್ಮನ ನಾಲ್ವರು ಮಗಂದಿರೂ ಮದುವೆ ಮಾಡಿಕೊಂಡು ಬೇರೆ ಬೇರೆ ಮನೆಗಳಲ್ಲಿದ್ದರು, ಯಾವ ಸೊಸೆಯೂ ಅತ್ತೆ ಕಾವಮ್ಮನನ್ನು ಸೇರಿಸಿಕೊಳ್ಳಲಿಲ್ಲ. ಸ್ವಲ್ಪ ಕಾಲ ಕಾವಮ್ಮ ಪ್ರತ್ಯೇಕವಾಗಿಯೇ ಇದ್ದಳು. ನಾಲ್ವರೂ ಅವಳಿಗೆ ತಲಾ ಸ್ವಲ್ಪ ಸ್ವಲ್ಪ ಹಣ ಕೊಡುತ್ತಿದ್ದರು. ಕ್ರಮೇಣ ಆ ಸಹಾಯ ಕೂಡಾ ಮಾಯ ವಾಯಿತು. ಆಗ ಕಾವಮ್ಮ ಒಬ್ಬರು ಧನಿಕರ ಮನೆಯಲ್ಲಿ ಚಾಕರಿ ಮಾಡುತ್ತ ಅಲ್ಲೇ ಇದ್ದಳು.

ಹೀಗಿರುವಾಗ ಒಂದು ದಿನ ವಿನಯನು ತನ್ನ ದೊಡ್ಡಮ್ಮನನ್ನು ನೋಡಲು ಬಂದು, ಅವಳು ಯಾವ ಮಗನ ಬಳಿಯಲ್ಲಿಯೂ ಇಲ್ಲದೆ, ಯಾರ ಆಶ್ರಯದಲ್ಲಿಯೋ ವೃದ್ಧಾಪ್ಯದಲ್ಲಿ ಕೂಡಾ ತನ್ನ ರಟ್ಟೆಯ ಬಲದಲ್ಲಿ ಕಷ್ಟಪಡುತ್ತ ಬದುಕಿರುವುದನ್ನು ತಿಳಿದು ತುಂಬಾ ನೊಂದುಕೊಂಡನು. ಅವನು ಆ ಧನಿಕನ ಮನೆಗೆ ಹೋಗಿ, ತನ್ನ ದೊಡ್ಡಮ್ಮ ಹೀಗೆ ಚಾಕರಿ ಮಾಡುತ್ತ ಬದುಕುವುದನ್ನು ನೋಡಿ ತಾನು ಸಹಿಸಲಾರೆನೆಂದೂ, ಅವಳನ್ನು ತನ್ನೊಂದಿಗೆ ಕರೆದುಕೊಂಡು ಹೋಗಿ ಪೋಷಿಸುವೆನೆಂದೂ ಹೇಳಿದನು.

ಧನಿಕನು ರಾಮುವಿನ ಒಳ್ಳೆಯ ಬುದ್ಧಿಯನ್ನು ಮೆಚ್ಚಿಕೊಂಡು, "ಬೆಳೆಯಿಸಿದ ತಾಯಿಯ ಮೇಲೆ ಇಷ್ಟು ಅಕ್ಕರೆ ತೋರಿಸುವವರು ಅಪೂರ್ವ. ನನಗೆ ಬಹಳ ಸಂತೋಷವಾಯಿತು. ನನ್ನ ಮಗಳನ್ನು ನಿನಗೆ ಕೊಟ್ಟು ಮದುವೆ ಮಾಡುತ್ತೇನೆ. ಒಪ್ಪಿಕೋ" ಎಂದನು.

"ಬೇಡ ಸ್ವಾಮಿ. ಮದುವೆ ಮಾಡಿಕೊಂಡರೆ ನನ್ನ ದೊಡ್ಡಮ್ಮನಿಗೆ ಮತ್ತೆ ಇದೇ ಗತಿ ಬಂದೀತು" ಎಂದ ರಾಮು.

ಧನಿಕನು ನಕ್ಕು, "ಆ ಭಯ ನಿನಗೆ ಬೇಡ. ನನಗೆ ಇರುವವಳು ಒಬ್ಬಳೇ ಮಗಳು. ನೀನೂ ನಿನ್ನ ತಾಯಿಯೂ ನಮ್ಮ ಮನೆಯಲ್ಲಿಯೇ ಇದ್ದು ಬಿಡಬಹುದು" ಎಂದನು. ರಾಮನು ಮದುವೆಗೆ ಒಪ್ಪಿದನು.





# ಬಂಗಾರದ ಲಾಚ್

ಒಂದಾನೊಂದು ನಗರ ಭಾಗದ ಒಂದು ಮನೆಯ ವಠಾರದಲ್ಲಿ ಮೂರು ಬಿಡಾರಗಳು ಒಳಗೊಂಡಿದ್ದುವು. ಒಂದು ಬಿಡಾರದಲ್ಲಿ ವರದಾಚಾರಿ ಎಂಬ ಉಪಾಧ್ಯಾಯರು, ತಮ್ಮ ಮನೆಯಲ್ಲೇ ಸುಮಾರು ಇಪ್ಪತ್ತೈದು ಮಂದಿ ಬಾಲಬಾಲಿಕೆಯರಿಗೆ ಪಾಠ ಹೇಳಿಕೊಡುತ್ತಿದ್ದರು. ಆ ಸಮಯದಲ್ಲಿ ಚಿಕ್ಕವರ ಮಗ್ಗಿ ಉರುಹಾಕುವ ಶಬ್ದವೂ ಉಪಾಧ್ಯಾಯರ ಗದರಿಸುವಿಕೆಯೂ ಕೇಳುತ್ತಾ ಇರುತ್ತದೆ.

ಎರಡನೇ ಬಿಡಾರದಲ್ಲಿರುವುದು ಜೋಗಿ ರಾಜನೆಂಬ ಭಕ್ತಾಗ್ರೇಸರ. ಅವನ ಮನೆಯಲ್ಲಿ ದಿನಾ ಭಜನೆಗಳೂ, ಪುರಾಣ ಕಾಲಕ್ಷೇಪವೂ, ಉಪನ್ಯಾಸ ಬೋಧನೆಗಳೂ ನಡೆದುಕೊಂಡಿರುವುವು. ಅದೊಂದು ಪರಮಾರ್ಥ ಮಂದಿರವಾಗಿತ್ತು.

ಮೂರನೇ ಬಿಡಾರದಲ್ಲಿರುವವನು ವೆಂಕಟಸುಬ್ಬಯ್ಯ. ಅವನಿಗೆ ಕೆಲಸ ಬೊಗಸೆಗಳೇನೂ ಇರಲಿಲ್ಲ. ಅವನು ಪಡೆದು ಬಂದ ವಿಶೇಷವೇನಂದರೆ, ಅದು ಅವನ ಭಾಗ್ಯದಾಯಿನಿ ಹೆಂಡತಿಯೇ! ಪ್ರತಿ ಶನಿವಾರವೂ ಅವನ ಹೆಂಡತಿಯ ಮೇಲೆ ದೇವರು ಬಂದು, ಅವಳು ದೇವತೆಯಾಗಿ, ಕೇಳಿದವರ ಪ್ರಶ್ನೆಗಳಿಗೆ ಉತ್ತರ ಹೇಳುತ್ತಾಳೆ. ತನ್ನ ಭಾಗ್ಯಲಕ್ಷ್ಮಿಯೊಂದಿಗೆ ಪ್ರಶ್ನೆಗಳನ್ನು ಕೇಳುವವರ ಕೈಯಿಂದ ವೆಂಕಟಸುಬ್ಬನು, ಒಂದು ಪ್ರಶ್ನೆಗೆ ಎರಡು ರೂಪಾಯಿಯಂತೆ ವಸೂಲು ಮಾಡುತ್ತಾನೆ. ಶನಿವಾರ ಬಂತೆಂದರೆ ಅವನ ಬಿಡಾರ ಜನಜಂಗುಳಿಯಿಂದ ತುಂಬಿ ಹೋಗುತ್ತದೆ.

ಮತ್ತೊಂದು ಕಷ್ಟವೇನೆಂದರೆ ಆ ವಠಾರಕ್ಕೆ ನೀರಿನ ಸೌಕರ್ಯವಿರಲಿಲ್ಲ. ಅದನ್ನು ಪೂರಯಿಸುವವನು ಮಂಗಣ್ಣ. ಅವನು ದೂರದ ಬಾವಿಯಿಂದ ಒಳ್ಳೆಯ ನೀರನ್ನು ಕಾವಡಿ ಬಿಂದಿಗೆಗಳಲ್ಲಿ ತಂದು ಮೂರು ಬಿಡಾರಗಳಿಗೂ ತುಂಬಿಸಿ ಕೊಡುತ್ತಾನೆ. ಅವನೊಬ್ಬ ಹಿಂದು ಮುಂದಿನವರಾರೂ ಇಲ್ಲದ ಏಕಾಂಗಿ. ತಾನು ಸಂಪಾದಿಸಿದ್ದನ್ನು ತಾನೇ ತಿಂದು ಮುಗಿಸಿದರೆ ತೀರಿತು.

ಪಾರ್ವತಿ ಎಂಬವಳು ಮೂರು ಬಿಡಾರಗಳಲ್ಲಿರುವವರ ಕಸಮುಸುರೆಗಳನ್ನು ಮಾಡುತ್ತ, ರೋಗಿಯಾಗಿ ಹಾಸಿಗೆ ಹಿಡಿದಿದ್ದ ತನ್ನ ತಂದೆಯನ್ನು ಪೋಷಿಸಿಕೊಂಡಿದ್ದಳು. ಹೀಗಿರುವ ಆ ವಠಾರದಲ್ಲಿ ಒಂದು ಶನಿವಾರದ ಸಾಯಂಕಾಲದಲ್ಲಿ, ಪಾರ್ವತಿ

ಎಂ. ಕೆ. ಈಶ್ವರರಾವ್

ಕೆಲವು ಅಡಿಗೇ ಪಾತ್ರಗಳನ್ನು ತೊಳೆದು ವೆಂಕಟ ಸುಬ್ಬನ ಮನೆಯ ಬಾಗಿಲ ಹತ್ತಿರ ತಂದಿಡುತ್ತಿದ್ದಳು. ಆ ದಿನವಿಡೀ ಬಾಯಿ ಬಿದ್ದುಹೋಗುವ ಹಾಗೆ ಕೇಳಿ ದವರ ಪ್ರಶ್ನೆಗಳಿಗೆ ಉತ್ತರ ಹೇಳಿ ಸುಸ್ತಾದ ವೆಂಕಟ ಸುಬ್ಬನ ಹೆಂಡತಿ ಉಬ್ಬಸಬಿಡುತ್ತ ಸ್ವಸ್ತ ಮಲಗಿದ್ದಳು. ದೇವರು ಬಿಟ್ಟುಹೋದ ನಿತ್ರಾಣ ಅವಳಿಗೆ ಪಾಪ! ಭಕ್ತರು ತಂದುಕೊಟ್ಟ ಹಣ್ಣುಗಳೂ, ತೆಂಗಿನಕಾಯಿ ಚಿಪ್ಪುಗಳೂ ಒಂದು ಬದಿಯಲ್ಲಿದ್ದುವನ್ನು ವೆಂಕಟ ಸುಬ್ಬನು ಎಣಿಸುತ್ತ ಬುಟ್ಟಿಗಳಲ್ಲಿ ಹಾಕಿಕೊಳ್ಳು ತ್ತಿದ್ದನು. ಕತ್ತಲೆಯಾದ ಕೂಡಲೇ ಅವನು ಅವುಗಳನ್ನು ಮಾರಿ ಹಣ ಮಾಡಿಕೊಂಡು ಬರುವುದು ವಾಡಿಕೆ. ಅಂತಲೇ ಮನಸ್ಸಿನಲ್ಲಿ ಎಷ್ಟು ಹಣಬರುವುದೆಂಬ ಲೆಕ್ಕ.

ಅಲ್ಲಿದ್ದ ಹಣ್ಣುಗಳನ್ನು ನೋಡಿದ ಕೂಡಲೇ ಪಾರ್ವತಿಗೆ ಹಾಸಿಗೆ ಹಿಡಿದಿದ್ದ ತನ್ನ ತಂದೆಯ ನೆನಪು ಬಂದಿತು. ಅವಳು ದಾಕ್ಷಿಣ್ಯಬಿಟ್ಟು, "ಅಯ್ಯಾ ಅವರೆ, ಕೊಂಡುಕೊಳ್ಳೋದೂ ಅಂದರೆ ತುಂಬಾ ಪ್ರಿಯ! ಎರಡು ಮೂಸಂಬಿ ಹಣ್ಣು ಕೊಡ್ತೀರಾ? ನನ್ನ ಅಪ್ಪನಿಗೆ ಕೊಡುತ್ತೇನೆ. ಹಾಸಿಗೆ ಹಿಡಿದ ವರು!" ಎಂದು ಬೇಡಿದಳು.

ವೆಂಕಟಸುಬ್ಬ ತಟಕ್ಕನೆ ಬುಟ್ಟಿಯನ್ನು ಬಟ್ಟೆ ಯಿಂದ ಮುಚ್ಚಿ, "ಬಿತ್ತಾ, ನಿನ್ನ ಹಾಳಾದ ಕಣ್ಣು! ಇನ್ನು ಇವುಗಳಿಗೆ ಏನು ಬೆಲೆ ಬರುತ್ತೋ! ದೇವ್ರೇ ಗತಿ!" ಎಂದನು.

ನಿತ್ರಾಣಳಾಗಿ ಮಲಗಿದ್ದ ವೇಕಟಸುಬ್ಬನ ಹೆಂಡತಿ ತಟ್ಟನೆದ್ದು ಕುಳಿತು ಉರಿಗಣ್ಣಿನಿಂದ ಪಾರ್ವತಿಯನ್ನು ನೋಡಿ, "ನಿನಗೆ ಸಂಬಳದ ಮೇಲೆ ಹಣ್ಣುಫಳಾರಾ ಎಲ್ಲಾ ಬೇಕೇನು? ಆಶೆಗೊಂದು ಅಂತ್ಯಬೇಕು! ಹೋಗು, ಹೋಗು!" ಎಂದಳು.

ಆ ಮಾತು ಕೇಳಿದ ಕೂಡಲೇ, ಪಾರ್ವತಿಗೆ ನಗು ಬಂತು. ಸ್ವಲ್ಪ ಮೊದಲು ಒಬ್ಬ ಮನುಷ್ಯನು ಕೇಳಿದ ಪ್ರಶ್ನೆಗೆ ಉತ್ತರವಾಗಿ ವೆಂಕಟಸುಬ್ಬನ



ಹೆಂಡತಿ, "ಲೋ, ನರನೇ! ಆಶೆಯಿಂದಲೇ ನಿನಗೆ ಈ ದುರವಸ್ಥೆ. ದುರಾಶೆಯನ್ನು ಬಿಟ್ಟು ಸುಖ ಪಡು" ಎಂದು ಹೇಳಿದ್ದನ್ನು ಪಾರ್ವತಿಯೂ ಕೇಳಿ ದ್ದಳು. ಅಂಥವಳು ಈಗ ಆಶೆಗೊಂದು ಅಂತ್ಯಬೇಕು ಅನ್ನುತ್ತಾಳೆ! ಹಾಗೆ ಹೇಳಿದ್ದು ಪಾರ್ವತಿಯಲ್ಲ, ಅವಳ ಮೇಲೆ ಬಂದ ಮಹಾದೇವತೆ!

ಆ ಸಮಯದಲ್ಲಿ ವರದಾಚಾರಿಯ ಬಿಡಾರಕ್ಕೆ ಮಂಗಣ್ಣ ನೀರು ತುಂಬಿಸುತ್ತಿದ್ದ. ವರದಾಚಾರಿಯ ಮಗನು ಓದಿದ ಹಳೆಯ ಪುಸ್ತಕಗಳನ್ನು ತನ್ನ ಪರಿಚ ಯದ ಒಬ್ಬ ಬಡವಿದ್ಯಾರ್ಥಿಗೆ ಕೊಡಿಸಬೇಕೆಂದು ಮಂಗಣ್ಣನ ಆಸೆ. ಒಂದುಸಾರಿ ವರದಾಚಾರಿ ವಿದ್ಯಾರ್ಥಿಗಳೊಂದಿಗೆ, "ಎಲ್ಲಾ ದಾನಗಳಲ್ಲಿಯೂ ವಿದ್ಯಾದಾನವು ದೊಡ್ಡದು" ಎಂದು ಹೇಳಿದುದನ್ನು ಮಂಗಣ್ಣನು ಕೇಳಿದ್ದನು.

ಅಂತಲೇ ಮಂಗಣ್ಣ ಆ ಬಡವಿದ್ಯಾರ್ಥಿಯ ಸಂಗತಿಯನ್ನು ವರದಾಚಾರಿಯೊಂದಿಗೆ ಹೇಳಿ,




"ನಿಮ್ಮ ಮಗನಿಗೆ ಇನ್ನು ಅಗತ್ಯವಿಲ್ಲದ ಆ ಹಳೆಯ ಪುಸ್ತಕಗಳನ್ನು ಕೊಟ್ಟರೆ ಪಾಪ, ಆ ಬಡವಿದ್ಯಾರ್ಥಿ ಓದಿಕೊಳ್ಳುತ್ತಾನೆ" ಎಂದನು.

"ಬಹಳ ಚೆನ್ನಾಗಿದೆ ನಿನ್ನ ಮಾತು! ಬಡಹುಡುಗರಿಗೆಲ್ಲ ವಿದ್ಯೆ ಏತಕ್ಕೆ? ಕೂಲಿನಾಲಿ ಮಾಡಿ ಬದುಕೋದು ಬಿಟ್ಟು? ಹಾಗೆ ಬೇಕಾದರೆ ಪುಸ್ತಕದ ಅರ್ಧ ಬೆಲೆ ಕೊಡಲಿ" ಎಂದರು ವರದಾಚಾರಿ ಉಪಾಧ್ಯಾಯರು.

ಅದು ಆಗುವ ಮಾತು ಅಲ್ಲವೆಂದು ಮಂಗಣ್ಣನು ಅಲ್ಲಿಂದ ಈಚೆಗೆ ಬಂದನು. ಆಗ ವೆಂಕಟಸುಬ್ಬನ ಬಿಡಾರದಿಂದ ಹೊರಗೆ ಬರುವ ಪಾರ್ವತಿ ಅವನಿಗೆ ಇದಿರಾದಳು. ಇಬ್ಬರೂ ಒಬ್ಬರ ವಿಷಯ ಒಬ್ಬರೊಂದಿಗೆ ಹೇಳಿಕೊಂಡರು.

"ಹೌದು ಬಿಡು. ಇಲ್ಲಿನವರೆಲ್ಲ ಒಂದೇ ಬಗೆಯ ಆಸೆ ಬಡಕರೇ. ಹೋಗಲಿ. ಇದು ಯಾವಾಗಲೂ ಇದದ್ದೇ. ನಾಳೆ ಪಕ್ಕದ ಊರಿನಲ್ಲಿ ಜಾತ್ರೆಯಲ್ಲವೆ? ನಾವು ಜಾತ್ರೆಗೆ ಹೋಗೋಣವೇ?" ಎಂದಳು ಪಾರ್ವತಿ.

"ಇಲ್ಲಿಯ ಕೆಲಸಗಳನ್ನೆಲ್ಲ ಯಾರು ಮಾಡುತ್ತಾರೆ?" ಎಂದು ಮಂಗಣ್ಣ ಕೇಳಿದ. "ಬೆಳಂಜಾಮದಲ್ಲೇ ಬಂದು ಕೆಲಸ ಮುಗಿಸಿ ಹೋಗೋಣ. ಸಾಯಂಕಾಲ ಬಾರದಿದ್ದರಾಯಿತು. ಜೋಗಿರಾಜರು ತುಂಬಾ ಭಕ್ತಿವಂತರು. ಅವರ ಅನುಮತಿ ಕೇಳಿ ಹೋಗೋಣ" ಎಂದಳು ಪಾರ್ವತಿ.

"ಹೌದು. ಒಂದು ದಿನದ ಕಾಲು ಭಾಗವನ್ನಾದರೂ ದೇವರ ಗುಡಿಯಲ್ಲಿ ದೈವಚಿಂತನೆಯಲ್ಲಿ ಕಳೆಯ ಬೇಕೆಂದು ಜೋಗಿರಾಜರು ಹೇಳುವುದನ್ನು ನಾನೂ ಕೇಳಿದ್ದೇನೆ" ಎಂದನು ಮಂಗಣ್ಣ.

ಅವರಿಬ್ಬರೂ ಜೋಗಿರಾಜನ ಅಪ್ಪಣೆ ಕೇಳಿದರೆ, ಆತನು ಅಪ್ಪಣೆ ಕೊಡಲಿಲ್ಲ. "ಅದೆಲ್ಲಾ ತಪ್ಪು. ನಿಮಗೆ ಆಶೆ ಜಾಸ್ತಿ. ಕೆಲಸ ಮಾಡದೆಯೇ ಸಂಬಳ ಬೇಕು ಅನ್ನುವಿರಿ. ಒಂದು ಹೊತ್ತು ಕೆಲಸ ಮಾಡದಿದ್ದರೆ ಸಂಬಳದಲ್ಲಿ ಕೊಯ್ದುಬಿಡುತ್ತೇನೆ. ದೇವರಿಗೋಸ್ಕರ ಜಾತ್ರೆಗೆ ಹೋಗಬೇಕೇನು? ಎಲ್ಲಿ ನೆನೆದರೂ ಅಲ್ಲೇ ದೇವರಿರುತ್ತಾನೆ" ಎಂದನು.

ಇಬ್ಬರೂ ಅಲ್ಲಿಂದ ಹೊರಟರು. "ಇಂಥವರೆಲ್ಲ ಹೇಳುವುದಕ್ಕೂ ಮಾಡುವುದಕ್ಕೂ ಹೊಂದಿಕೆಯೇ ಇಲ್ಲ" ಎಂದಳು ಪಾರ್ವತಿ ಕೋಪದಿಂದ. ಆಮೇಲೆ ಜಾತ್ರೆಯ ಯೋಚನೆ ಬಿಟ್ಟುಹೋಯಿತು.

ಮರುದಿನ ಬೆಳಿಗ್ಗೆ ಮಸಕುಮಸಕು ಬೆಳಕಿನಲ್ಲಿ ನೀರು ಹೊತ್ತು ತರುತ್ತಿದ್ದ ಮಂಗಣ್ಣನ ಕಣ್ಣುಗಳಿಗೆ ನೆಲದಲ್ಲಿ ಏನೋ ಹೊಳೆಯುವುದು ಕಂಡಿತು. ಕಾವಡಿಯನ್ನಿಳಿಸಿ ಅದನ್ನು ಕೈಯಲ್ಲಿ ಎತ್ತಿಕೊಂಡನು. ಆದೊಂದು ಬಂಗಾರದ ಉಂಗುರ.

ಆಗಲೇ ಕಸಮುಸುರೆಗೆ ಬರುತ್ತಿದ್ದ ಪಾರ್ವತಿಗೆ ಮಂಗಣ್ಣ ಆ ಉಂಗುರವನ್ನು ತೋರಿಸಿ, "ಸಿಕ್ಕಿತು! ಚಿನ್ನದ್ದು!" ಎಂದನು.

ಆಗ ದಂತಧಾವನ ಮಾಡಿಕೊಳ್ಳಲು ಆ ಕಡೆಗೆ ಬರುತ್ತಿದ್ದ ವೆಂಕಟಸುಬ್ಬನ ಕಿವಿಗೆ "ಸಿಕ್ಕಿತು" ಎಂಬ ಮಾತು ಕೇಳಿ, ಬೇಗ ಬೇಗನೇ ಅವರ ಬಳಿಗೆ ಬಂದು, ಉಂಗುರವನ್ನು ನೋಡಿ, "ಅರೆ! ಇದು ನನ್ನದೇ ಉಂಗುರ! ಒಬ್ಬ ಭಕ್ತನು ಕಾಣಿಕೆಯಾಗಿ ಕೊಟ್ಟಿದ್ದು. ಬೆರಳಿನಿಂದ ಜಾರಿ ಬಿದ್ದುಹೋಗಿತ್ತು. ಕೊಡು ಹೀಗೆ!" ಎಂದನು.

ಆಗ ಅವನ ಹಿಂದೆಯೇ ಬಂದ ಅವನ ಹೆಂಡತಿ, "ನೋಡಿದಿರಾ? ಭಕ್ತರು ಭಕ್ತಿ ಶ್ರದ್ಧೆಯಿಂದ ಕೊಟ್ಟಿದ್ದು ಹೇಗೆ ಹೋದೀತು? ಅದಾಗಿಯೇ ಸಿಕ್ಕಿತು!" ಎಂದಳು.

ಈ ಮಾತು ಕೇಳಿ ಅಲ್ಲಿಗೆ ಓಡಿ ಬಂದ ವರದಾಚಾರಿ ಉಪಾಧ್ಯಾಯರು, ಸಮಾಚಾರ ತಿಳಿದು, "ಆ ಉಂಗುರ ನನ್ನ ಶಿಷ್ಯರು ಗುರುದಕ್ಷಿಣೆಯಾಗಿ ನನಗೆ ಕೊಟ್ಟಿದ್ದು. ಹೀಗೆ ಕೊಡು!" ಎಂದರು.

"ಹೌದು ಮತ್ತೆ! ಹಗಲೆಲ್ಲಾ ಬೆರಳಲ್ಲಿಟ್ಟು ಕೊಂಡು ತಿರಿಗಿದಿರಿ. ಜಾರಿ ಹೋಯ್ತು! ಬೇಡಾ ಅಂದರೆ ಕೇಳಿದಿರಾ? ಇನ್ನಾದರೂ ಒಳಗಿಡಿ!" ಎಂದಳು ವರದಾಚಾರಿಯ ಹೆಂಡತಿ.

ಬಾಗಿಲಲ್ಲೇ ನಿಂತು ಇದನ್ನೆಲ್ಲಾ ನೋಡುತ್ತಿದ್ದ ಜೋಗಿರಾಜ ಬೇಗ ಬೇಗನೇ ಅಲ್ಲಿಗೆ ಬಂದು, "ಇಲ್ಲಿ ಸಿಕ್ಕೀತೇ? ಪಕ್ಕದ ಊರಿನಲ್ಲಿ ನಾನು ರಾಮಾಯಣ ಪಾರಾಯಣ ಮಾಡಿದಾಗ, ಆ ಊರವರೆಲ್ಲ ಚಂದಾ ಹಾಕಿ ಈ ಉಂಗುರ ಮಾಡಿಸಿ ನನಗೆ ಕೊಟ್ಟರು. ಅದನ್ನು ನನಗೇ ಕೊಡು, ನನ್ನದೇ" ಎಂದು ಕೈ ನೀಡಿದನು.

"ಹೌದಲ್ಲ! ದೇವರ ಹೆಸರಿನಲ್ಲಿ ಕೊಟ್ಟಿದ್ದು. ಬೇರೆಯವರು ಮುಟ್ಟಿದರೆ ಕಣ್ಣು ಹೋದೀತು!" ಎಂದಳು ಜೋಗಿರಾಜನ ಹೆಂಡತಿ.

ಹೀಗೆ ಆ ಮೂವರೂ ಉಂಗುರವು ತಮ್ಮದೇ ಎಂದು ಕೂಗಾಡಿಕೊಂಡು ಮಂಗಣ್ಣನನ್ನು ಮುತ್ತಿ ಕೊಂಡರು. ಅದನ್ನು ಯಾರ ಕೈಗೆ ಕೊಡಬೇಕೆಂದು ಮಂಗಣ್ಣನಿಗೆ ಗೊತ್ತಾಗಲಿಲ್ಲ. ಆಗ ಪಾರ್ವತಿ ತಟ್ಟನೆ ಮಂಗಣ್ಣನ ಕೈಯಿಂದ ಆ ಉಂಗುರವನ್ನು ತೆಗೆದು



ಕೊಂಡು, "ನಿನ್ನೆ ರಾತ್ರಿ ಗುಡ್ಡಪ್ಪನ ಕಳ್ಳಂಗಡಿಗೆ ಯಾರು ಹೋದರೋ ಅವರದೇ ಈ ಉಂಗುರ! ಇದು ಮಂಗಣ್ಣನಿಗೆ ಆ ಹೆಂಡದಂಗಡಿಯಲ್ಲಿ ಸಿಕ್ಕಿತು" ಎಂದಳು.

ಆ ಮಾತು ಕೇಳಿ ಎಲ್ಲರ ಮುಖಗಳೂ ಬಿಳಿಚು ಗಟ್ಟಿತು. ಒಬ್ಬೊಬ್ಬರೂ ಆ ಉಂಗುರವನ್ನು ತಿರುವಿ ತಿರುವಿ ನೋಡಿ, "ನನ್ನದೂಂತ ಮಾಡಿದೆ. ಇದಲ್ಲ ನನ್ನದು...ಇಂಥಾದ್ದೇ ಉಂಗುರ ನನ್ನ ಹತ್ತರ ಇತ್ತು...ಓ! ಮೊನ್ನೆ ಪೆಟ್ಟಿಗೆಯಲ್ಲಿಟ್ಟು ಮರೆತಿದ್ದೆ" ಎಂದು ಹೇಳಿಕೊಂಡು ಸಪ್ಪಗಾಗಿ ಹೊರಟುಹೋದರು. ಅವರು ಹೋದ ಮೇಲೆ ಪಾರ್ವತಿಯೂ ಮಂಗಣ್ಣನೇ ಅಲ್ಲಿ ಉಳಿದರು. ಪಾರ್ವತಿ ಬಿದ್ದುಬಿದ್ದು ನಕ್ಕಳು. ಮಂಗಣ್ಣ ಪಿಳಿ ಪಿಳಿ ಅವಳ ಮುಖ ನೋಡಿ, "ಈ ಉಂಗುರ ಹೆಂಡದಂಗಡಿಯಲ್ಲಿ ಸಿಕ್ಕಿತು ಅಂತ ಏಕೆ ಸುಳ್ಳು ಹೇಳಿದೆ? ಅದೇನು ಕತೆ" ಎಂದು ಆಶ್ಚರ್ಯದಿಂದ ಅವಳನ್ನು ಕೇಳಿದ.

"ನೀನೊಬ್ಬ ಶುದ್ಧ ಹಾಲಿನಂಥವ! ಮನುಷ್ಯರ ಗುಟ್ಟು ನಿನಗೇನೂ ಗೊತ್ತಾಗೋದಿಲ್ಲ. ಈ ಉಂಗುರ ಅವರಾರದೂ ಅಲ್ಲವೆಂಬುದನ್ನು ನಿಜಪಡಿಸಿಕೊಳ್ಳ ಲಿಕ್ಕಾಗಿ ಹಾಗೆ ಹೇಳಿದೆ. ಮರ್ಯಾದೆಗಾಗಿ ಪೇಚಾ ಡುವ ಈ ಮನುಷ್ಯರು ತಾವು ಹೆಂಡದಂಗಡಿಗೆ ಹೋದೆವೆಂದು ಹೇಳಬಲ್ಲರೇ? ಅದಕ್ಕಿಂತ ಘೋರ ವಾದ ಕೆಲಸ ಬೇಕಾದರೆ ಮಾಡಿಯಾರು. ಇವರ ಸ್ವಾರ್ಥ ನೋಡಿದರೆ ಅಸಹ್ಯವೆನಿಸುತ್ತದೆ. ಅದರ ಮೇಲೆ ಇನ್ನೊಬ್ಬರನ್ನು ಆಸೆ ಬಡಕರೆನ್ನುತ್ತಾರೆ. ಈ ಉಂಗುರದ ನಿಜವಾದ ಒಡೆಯ ಯಾರೆಂಬುದು ತಿಳಿಯುವವರೆಗೂ ಇದು ನಿನ್ನದೇ. ಹತ್ತಾರು ಮಂದಿ ಬಂದು ಹೋಗುವ ವಠಾರತಾನೇ? ಯಾರ ಬೆರಳಿಂದಲೋ ಜಾರಿಬಿದ್ದು ಹೋಗಿದೆ!" ಎಂದು ಹೇಳಿ ಪಾರ್ವತಿ ಉಂಗುರವನ್ನು ಮಂಗಣ್ಣನ ಕೈಗೆ ಕೊಟ್ಟಳು.

"ಹೌದು. ನನಗೆ ಬುದ್ಧಿ ಕಡಿಮೆಯೇ. ನಿನ್ನಂಥ ಬುದ್ಧಿವಂತೆಯೊಬ್ಬಳು ಯಾವಾಗಲೂ ಜತೆಗಿದ್ದರೆ ಎಷ್ಟು ಒಳ್ಳೇದಿತ್ತು. ನಿನಗೆ ಇಷ್ಟವಿದ್ದರೆ ಹೇಳು, ಇದನ್ನು ನಿನ್ನ ಬೆರಳಿಗೆ ತೊಡಿಸುತ್ತೇನೆ, ನಿಶ್ಚಿತಾರ್ಥ ಅಂದುಕೊಂಡು" ಎಂದ ಮಂಗಣ್ಣ.

ಪಾರ್ವತಿ ಸ್ವಲ್ಪ ನಾಚಿ, "ಅಪ್ಪನನ್ನು ಕೇಳೋಣ, ಬಾ. ಅಸಲು ಇದು ನಿಜವಾದ ಬಂಗಾರವೋ, ಏನಾದರೂ ಗಿಲೀಟೋ!" ಎಂದಳು.

"ಹಿತ್ತಾಳಿಯದೇ ಆದರೇನಂತೆ? ಇದರ ಪುಣ್ಯ ದಿಂದ ನಿಜವಾದ ಬಂಗಾರ ಸಿಕ್ಕಿತಲ್ಲ!" ಎಂದ ಮಂಗಣ್ಣ ಪಾರ್ವತಿಯನ್ನು ಪ್ರೇಮದಿಂದ ನೋಡುತ್ತ.





# ಆಭರಣಭಂಗ

ಒಂದು ಊರಿನಲ್ಲಿ ರಾಜಮ್ಮ ಎಂಬವಳ ಗಂಡ ಒಳ್ಳೆಯ ಸ್ಥಿತಿಯಲ್ಲಿದ್ದುದರಿಂದ ರಾಜಮ್ಮನಿಗೆ ಯಾವುದರ ಕೊರತೆಯೂ ಇರಲಿಲ್ಲ. ಮುಖ್ಯವಾಗಿ ಅವಳಿಗೆ ಆಭರಣಗಳ ಮೋಹ ಜಾಸ್ತಿ. ಶರೀರ ತುಂಬಾ ತನಗೆ ಬೇಕೆನಿಸಿದ ಆಭರಣಗಳನ್ನು ಮಾಡಿಸಿ ಹಾಕಿಕೊಂಡು ತನಗೆತಾನೇ ಸಂತೋಷಪಡುತ್ತಿದ್ದಳು. ಯಾರಿಗಾದರೂ ಎಷ್ಟೇ ಅಗತ್ಯ ಬಂದು ಪ್ರಾರ್ಥಿಸಿ ಕೇಳಿದರೂ, ಕೈಗಡವಾಗಿಯೋ ತಾತ್ಕಾಲಿಕವಾಗಿಯೋ ಇನ್ನೊಬ್ಬರಿಗೆ ಕೊಡುವವಳಲ್ಲ.

ರಾಜಮ್ಮನ ಅಣ್ಣ ಸುಬ್ಬಯ್ಯನ ಮಗಳಿಗೆ ಮದುವೆ ನಿಶ್ಚವಾಯಿತು: ಸುಬ್ಬಯ್ಯ ದೊಡ್ಡ ಆಸ್ತಿವಂತನಾದುದರಿಂದ ಮಗಳ ಮದುವೆಯನ್ನು ಗಡದ್ದಿನಿಂದಲೇ ಮಾಡುತ್ತಿದ್ದನು. ರಾಜಮ್ಮ ಆ ಮದುವೆಗೆ ಒಂದು ದಿನ ಮುಂದಾಗಿಯೇ ಹೋದಳು.

ವಿವಾಹ ಮುಹೂರ್ತದ ವೇಳೆ ಸಮೀಪಿಸಲಿಕ್ಕೆ ಆಗುವಾಗ, ಸುಬ್ಬಯ್ಯ ರಾಜಮ್ಮನನ್ನು ರಹಸ್ಯವಾಗಿ ಬದಿಗೆ ಕರೆದು, "ತಂಗೀ, ನಿನ್ನಿಂದ ಒಂದು ಸಣ್ಣ ಉಪಕಾರವಾಗಬೇಕಾಯಿತು. ಹುಡುಗಿಗೆ ಬೇಕಾದ ಮದುವೆಯ ಆಭರಣಗಳನ್ನು ಮಾಡಿಸಲು ನಗರದಲ್ಲಿದ್ದ ಅಕ್ಕಸಾಲೀ ಹತ್ತರ ಹದಿನೈದು ದಿನಗಳ ಹಿಂದೆಯೇ ಕೊಟ್ಟಿದ್ದೆ. ಇಷ್ಟರವರೆಗೂ ನಗಗಳು ಬರಲಿಲ್ಲ. ಮುಹೂರ್ತವೇಳೆ ಸಮೀಪಿಸಲಿಕ್ಕಾಯಿತು. ಮದುಮಗಳ ಮೈ ಮೇಲೆ ಆಭರಣಗಳೇನಿಲ್ಲದೆ ಮಂಟಪಕ್ಕೆ ತಂದು ಕೂಡಿಸುವುದು ಚೆನ್ನಾಗಿರುವುದಿಲ್ಲ. ಆದ್ದರಿಂದ ಹುಡುಗಿಗೆ ನಿನ್ನ ಆಭರಣಗಳನ್ನೆಲ್ಲ ತೊಡಿಸಿ ನೀನೇ ಅವಳನ್ನು ಕರೆತಂದು ಹಸೇ ಮೇಲೆ ಕೂಡಿಸು. ಮದುವೆ ಮುಗಿದ ಮೇಲೆ ನಿನ್ನ ಆಭರಣಗಳನ್ನೆಲ್ಲ ತೆಗೆದುಕೊಳ್ಳಬಹುದು" ಎಂದನು.

ಹಾಗೆ ಮಾಡಲು ರಾಜಮ್ಮನ ಮನಸ್ಸಿಗೆ ಬರಲಿಲ್ಲ. "ಆದರೆ ಅಣ್ಣಾ, ನಾನು ತೊಟ್ಟಿರುವ ಈ ಆಭರಣಗಳೆಲ್ಲಾ ಅಸಲು ಬಂಗಾರದ್ದಾದರೆ ನೀನು ಹೇಳಿದ ಹಾಗೇ ಹುಡುಗೀನ ಅಲಂಕರಿಸಲು ನನಗೇನೂ ಅಭ್ಯಂತರವಿದ್ದಿಲ್ಲ. ಆದರೆ ನನ್ನದೆಲ್ಲಾ ಕೇವಲ ಗಿಲೀಟು ನಗಗಳಾಯಿತಲ್ಲಾ! ಆ ಸಂಗತಿ ನಿನಗೆ ಗೊತ್ತಿಲ್ಲದಿದ್ದರೂ, ನನ್ನ ಮನಸ್ಸಿಗೆ ಮದುವೆಯಾಗುವ ಹುಡುಗಿಗೆ ಇದೊಂದು ಅಪಶಕುನದ ಹಾಗೆ ಆದೀತೋ ಅಂತ ಭಯವಾಗಿದೆ. ಎಷ್ಟಾದರೂ ಮದುಮಗಳನ್ನು ಗಿಲೀಟು ನಗಗಳಿಂದ ಅಲಂಕರಿಸು

ವುದು. ತಪ್ಪು ಅಣ್ಣಾ!" ಎಂದು ಉಪಾಯವಾಗಿ ಹೇಳಿ ತಪ್ಪಿಸಿಕೊಂಡಳು.

ಸುಬ್ಬಯ್ಯ ತಂಗಿ ಹೇಳಿದ ಮಾತು ನಿಜವೆಂದೇ ನಂಬಿದನು. ಅವನಿಗೆ ಮತ್ತೆ ಆಲೋಚನೆಗೆ ಅವ ಕಾಶವಿಲ್ಲದಂತೆ ನಗರದ ಅಕ್ಕಸಾಲಿಗನು ಆಭರಣ ಗಳನ್ನು ತಂದು ಒಪ್ಪಿಸಿಬಿಟ್ಟನು. ತಡವಾದುದಕ್ಕೆ ಅವನು ಹೇಳುವ ಕಾರಣಗಳನ್ನು ಕೇಳುತ್ತಾ ಕೂಡದೆ, ಶುಭಕಾರ್ಯ ಮುಂದುವರಿದು ಮುಹೂರ್ತ ತಪ್ಪದೆ ಮದುವೆ ನಿರಾತಂಕವಾಗಿ ನಡೆದುಬಿಟ್ಟಿತು.

ಆ ದಿನ ರಾತ್ರಿ ಮದುವೆಗೆ ಬಂದಿದ್ದ ಬಂಧು ಬಳಗದವರೆಲ್ಲ ಅಲ್ಲೇ ತಂಗಿದ್ದರು. ಅನೇಕರನ್ನು ಸುಬ್ಬಯ್ಯನೇ ಒತ್ತಾಯಿಸಿ ಅಲ್ಲೇ ನಿಲ್ಲಿಸಿಕೊಂಡಿದ್ದ. ರಾತ್ರಿ ಊಟ ಉಪಚಾರಗಳೆಲ್ಲ ಮುಗಿದ ಮೇಲೆ ರಾಜಮ್ಮನೂ, ಮತ್ತಿಬ್ಬರು ಹೆಂಗುಸರೂ ಒಂದು ಕೋಣೆಯಲ್ಲಿ ಮಲಗಿದರು.

ಅರ್ಧರಾತ್ರಿಯ ಹೊತ್ತಿಗೆ ಯಾರೋ ಕಳ್ಳರು ರಾಜಮ್ಮ ಮಲಗಿದ ಕೋಣೆಯೊಳಗೆ ಹೊಕ್ಕರು. ಆ ಶಬ್ದಕ್ಕೆ ಎಚ್ಚೆತ್ತ ಹೆಂಗುಸರಿಗೆ ಕಳ್ಳರು ಕತ್ತಿ ತೋರಿಸಿ, ಸದ್ದು ಮಾಡಿದರೆ ಕೊಲ್ಲುತ್ತೇವೆಂದು ಗದ ರಿಸಿ, ಆ ಮೂವರು ಮುತ್ತೈದೆಯರ ಶರೀರದಲ್ಲಿದ್ದ ಎಲ್ಲಾ ನಗಗಳನ್ನೂ ಎಳೆದು ಕಿತ್ತು ಸುಲಿದುಕೊಂಡು ಓಡಿಹೋದರು.

ಕಳ್ಳರು ಓಡಿಹೋಗುವವರೆಗೂ, ಪ್ರಾಣ ಭಯ ದಿಂದ ಬಾಯಿ ಬಿಗಿದುಕೊಂಡಿದ್ದ ಆ ಹೆಂಗುಸರು, ಆಮೇಲೆ ಘೋರನೆ ಅಳಲಾರಂಭಿಸಿದರು. ಮೂವರು ಹೆಂಗುಸರೂ ಕೆಟ್ಟದನಿಯಿಂದ ರೋದಿಸುವುದನ್ನು ಕೇಳಿ ಎಲ್ಲರ ನಿದ್ದೆಯೂ ಹಾರಿಹೋಯಿತು.

ಸುಬ್ಬಯ್ಯ ತನ್ನ ಮಗಳ ಮದುವೆ ನಡೆದ ಮನೆ ಯಲ್ಲಿ ಏನು ಕೇಡು ಬಂದಿತೋ ಎಂದು ಹೆದರಿ ಕೊಳ್ಳುತ್ತಾ ಓಡಿ ಬಂದು, ನಡೆದ ಸಂಗತಿಯನ್ನು ಕೇಳಿ, ನಗಗಳನ್ನು ಕಳೆದುಕೊಂಡವರೊಂದಿಗೆ, "ಅಮ್ಮಗಳಿರಾ! ನೀವೇನೂ ಚಿಂತೆ ಪಡಬೇಡಿ. ನನ್ನ ಮನೆಯಲ್ಲಿ ನೀವು ಕಳೆದುಕೊಂಡ ನಿಮ್ಮ ಸೊತ್ತು ಗಳ ಜವಾಬ್ದಾರಿ ನನ್ನದು. ನಿಮ್ಮದು ಎಷ್ಟೆಷ್ಟು ಬೆಲೆಯ ಏನೇನು ನಗಗಳು ಹೋದುವೆಂಬ ವಿವರ ಗಳನ್ನು ಹೇಳಿರಿ. ಪಟ್ಟಿ ಮಾಡುತ್ತೇನೆ. ಅವನ್ನೆಲ್ಲಾ ನಾನೇ ಮಾಡಿಸಿ ಕೊಡುತ್ತೇನೆ" ಎಂದು ಹೇಳಿ, ತಂಗಿ ರಾಜಮ್ಮನನ್ನು ನೋಡಿ, "ತಂಗೀ! ನೀನು ತುಂಬಾ ಮುಂದಾಲೋಚನೆಯವಳಾದ್ದರಿಂದ ಗಿಲೀಟು ನಗಗಳನ್ನು ಹಾಕಿಕೊಂಡು ಮದುವೇ ಮನೆಗೆ ಬಂದಿದ್ದೀ! ಆದರೂ ಅವುಗಳ ಬೆಲೆ ಹೇಳು, ಕೊಡು ತ್ತೇನೆ" ಎಂದನು. ಆ ಮಾತು ಕೇಳಿ ರಾಜಮ್ಮನ ಮುಖವು ಕಪ್ಪಿಟ್ಟುಹೋಯಿತು. ಏನು ಹೇಳಲಿಕ್ಕೂ ಅವಳ ನಾಲಗೆ ಏಳಲಿಲ್ಲ.






ಕಡೆಗೂ ಹರಿಶ್ಚಂದ್ರನು ವರುಣನನ್ನು ಒಲಿಸಲು ನರಮೇಧಕ್ಕೆ ತಲೆಹಾಕಿದರೂ ವಿಶ್ವಾಮಿತ್ರನ ಪುಣ್ಯ ದಿಂದ ಎಲ್ಲವೂ ಸುಖಾಂತವಾಗಿ ಹೋದ ಮೇಲೆ ಹರಿಶ್ಚಂದ್ರನಿಗಾದ ಆನಂದಕ್ಕೂ ತೃಪ್ತಿಗೂ ಮೇರೆ ಯಿಲ್ಲದೆ ಹೋಯಿತು. ವಿಶ್ವಾಮಿತ್ರನನ್ನು ಅವನು ತುಂಬಾ ಸತ್ಕರಿಸಲು ನೋಡಿದನು. "ಅದೆಲ್ಲಾ ಮಹಾದೇವಿಯ ಮಂತ್ರ ಮಹಿಮೆ. ನನ್ನದೇನಿಲ್ಲ," ಎಂದು ಹೇಳಿ, ವಿಶ್ವಾಮಿತ್ರನು ಹೊರಟು ಹೋಗಿ ಬಿಟ್ಟಿದ್ದನು. ಅಂತಲೇ ಹರಿಶ್ಚಂದ್ರನ ಆನಂದದ ಗೌರವ ವರ್ಷಣವೆಲ್ಲವೂ ವಸಿಷ್ಠನ ಮೇಲೆಯೇ ಸುರಿಯಿತು. ತನಗೆ ಸರಿಯಾದ ಅಲೋಚನೆ ಹೇಳಿದ ಕುಲಪುರೋಹಿತ ವಸಿಷ್ಠನನ್ನು ತುಂಬಾ ಸನ್ಮಾನ ಗಳಿಂದ ಸಂತೋಷಪಡಿಸಿದನು. ಮಹಾದೇವಿಯನ್ನು ನೆನೆಯಲೇ ಇಲ್ಲ.

ಒಂದು ದಿನ ವಸಿಷ್ಠನು ದೇವೇಂದ್ರನನ್ನು ನೋಡಲು ಇಂದ್ರಸಭೆಗೆ ಹೋದನು. ಆ ದಿನ ವಿಶ್ವಾಮಿತ್ರನೂ ಇಂದ್ರಸಭೆಗೆ ಬಂದಿದ್ದನು. ಆಗ ವಸಿಷ್ಠನ ಶರೀರದ ಮೇಲ ಅನೇಕ ಬಹುಮಾನದ ಅಲಂಕಾರಗಳಿರುವುದನ್ನು ನೋಡಿ ವಿಶ್ವಾಮಿತ್ರನು ತನ್ನೊಳಗೆ ಮುಗುಳು ನಕ್ಕು ತಲೆದೂಗಿದನು. ದಿಕ್ಪಾಲಕರಲ್ಲೊಬ್ಬನು ವಸಿಷ್ಠನನ್ನು ನೋಡಿ "ಹೀಗೆ ನಿಮ್ಮನ್ನು ಸನ್ಮಾನಿಸಿದವನು ಯಾರೋ ?" ಎಂದು ಕೇಳಿದನು,

ವಸಿಷ್ಠನು ಹೆಮ್ಮೆಯಿಂದ, "ಯಾರೇಕೆ ಬಹುಮಾನಿಸುವರು ? ಚಂದ್ರನಂತಹ ಸತ್ಯ ಹರಿಶ್ಚಂದ್ರನು ನನ್ನ ಶಿಷ್ಯ ತಾನೇ ? ಹೇಳಿದ ಮಾತು ನಡೆಸುವುದರಲ್ಲಿ ವರುಣನನ್ನು ಮೆಚ್ಚಿಸಿ ಸತ್ಯ ಹರಿಶ್ಚಂದ್ರನೆನಿಸಿದನು. ಅವನಿಗೆ ಸರಿಯಾದ ರಾಜರು ಈಗ ಯಾರಿದ್ದಾರೆ ? ರಾಜಸೂಯ ಯಾಗ ಕೂಡಾ ಮಾಡಿದನು. ಎಲ್ಲಾ ರಾಜರನ್ನೂ ಮೆಚ್ಚಿಸಿದನು. ದಾನಧರ್ಮಗಳಿಂದ ಪ್ರಜೆಗಳನ್ನೂ ಮೆಚ್ಚಿಸಿದನು. ನಿಜ ಹೇಳ ಬೇಕೆಂದರೆ, ದಾನಧರ್ಮಗಳಲ್ಲಾಗಲಿ, ಶೌರ್ಯ ಪರಾಕ್ರಮಗಳಲ್ಲಿಯಾಗಲೀ, ಧರ್ಮ ಕಾರ್ಯಗಳಲ್ಲಿಯಾಗಲೀ, ಹರಿಶ್ಚಂದ್ರನಂಥವರು

೨೬. ಹರಿಶ್ಚಂದ್ರನ ಕಷ್ಟಗಳು




ಹದಿನಾಲ್ಕು ಲೋಕಗಳಲ್ಲಿಯೂ ಇಲ್ಲ" ಎಂದು ಹರಿಶ್ಚಂದ್ರನನ್ನು ಆಕಾಶದಷ್ಟೆತ್ತರಕ್ಕೆ ಹೊಗಳಿದನು. ವಸಿಷ್ಠನು ಹೇಳಿದುದನ್ನು ಕೇಳುತ್ತಿದ್ದಂತೆ ವಿಶ್ವಾಮಿತ್ರನಿಗೆ ಕೋಪದಿಂದ ಮೈ ಉರಿಯಿತು.

"ಅಲ್ಲಯ್ಯಾ ವಸಿಷ್ಠಾ ! ಕೇವಲ ಸುಳ್ಳುಗಾರನೂ, ಕಪಟಿಯೂ ಆದ ರಾಜನನ್ನು ಹೀಗೆ ತಿರುಗುಮುರುಗು ಮಾಡಿ ಹೊಗುಳುವುದೆಂದರೇನು ? ನಿಮ್ಮ ಹರಿಶ್ಚಂದ್ರನು ವರುಣನನ್ನು ಮೋಸಪಡಿಸಲಿಲ್ಲವೇ ? ಸುಮ್ಮನೆ ಬಾಯಿ ಮಾತಿನಿಂದ ಪ್ರಯೋಜನವೇನಿದೆ ? ಪಂಥ ಒಡ್ಡಿ ಹೇಳುತ್ತೇನೆ. ಹರಿಶ್ಚಂದ್ರನು ಸತ್ಯವಂತನಲ್ಲ. ದಾತನೂ ಅಲ್ಲ. ದುಷ್ಟನು. ಇದನ್ನು ನಾನು ನಿರೂಪಿಸದೇ ಹೋದರೆ ನನ್ನ ಪುಣ್ಯವೆಲ್ಲಾ ನಾಶವಾಗಿ ಹೋಗಲಿ. ಹಾಗೆ ನಾನು ನಿರೂಪಿಸಿಬಿಟ್ಟರೆ ನಿನ್ನ ಪುಣ್ಯವೆಲ್ಲಾ ನಾಶವಾಗಿ ಹೋಗುವುದಕ್ಕೆ ನೀನೂ ಒಪ್ಪಿಕೊಳ್ಳುವೆಯಾ ? " ಎಂದನು ವಸಿಷ್ಠನನ್ನು ನೋಡಿ.

ವಸಿಷ್ಠನು ಕೂಡಲೇ ಪಂಥಕ್ಕೆ ಒಪ್ಪಿದನು. ಇಬ್ಬರೂ ಅಲ್ಲಿಂದ ತಮ್ಮ ತಮ್ಮ ಆಶ್ರಮಕ್ಕೆ ಹಿಂದಿರುಗಿದರು. ಈ ಪಂದ್ಯವನ್ನು ಕುರಿತು ವಸಿಷ್ಠನು ಭೂಮಿಯಲ್ಲಿ ಯಾರ ಹತ್ತಿರವೂ ಬಾಯಿ ಬಿಡಲಿಲ್ಲ. ಏನೂ ನಡೆಯದಂತೆ ಸುಮ್ಮನಿದ್ದು ಬಿಟ್ಟನು. ಮನಸ್ಸಿನಲ್ಲಿ ಮಾತ್ರ ಏನಾಗುವುದೋ ಎಂಬ ಭಯ !

ಒಂದು ದಿನ ಹರಿಶ್ಚಂದ್ರನು ವನವಿಹಾರ ಮಾಡುತ್ತ ಅರಣ್ಯದಲ್ಲಿ ತಿರುಗುತ್ತಿರಲು ಏನೋ ದುಃಖಾರ್ತಳಾಗಿ ರೋದಿಸುವ ಸ್ತ್ರೀಯೋರ್ವಳನ್ನು ನೋಡಿದನು. ಅವಳ ದಾರುಣವಾದ ರೋದನವನ್ನು ಕೇಳಿ ಹರಿಶ್ಚಂದ್ರನು ಮನಕರಗಿ ಅವಳ ಬಳಿಗೆ ಹೋಗಿ, "ಈ ಭಯಂಕರವಾದ ಅರಣ್ಯದಲ್ಲಿ ನೀನೇಕೆ ಬಂದೆ ? ನಿನ್ನ ಗಂಡನು ಎಲ್ಲಿಗೆ ಹೋದನು ? ನನ್ನ ರಾಜ್ಯದಲ್ಲಿ ಕ್ರೂರರೂ ರಾಕ್ಷಸರೂ ಯಾರೂ ಇಲ್ಲವಲ್ಲಾ ? ನಿನಗೆ ಇಂತಹ ದುಃಖವನ್ನುಂಟುಮಾಡಿದವನು ಯಾವನೆಂದು ಹೇಳು. ಅವನನ್ನು ವಿಚಾರಿಸುತ್ತೇನೆ" ಎಂದನು.

ಹರಿಶ್ಚಂದ್ರನು ಒತ್ತಾಯಪಡಿಸಿ ಕೇಳಿದ ಮೇಲೆ ಅವಳು ಹೀಗೆಂದಳು :

"ರಾಜಾ, ನಾನು ಭೂದೇವಿ, ವಿಶ್ವಾಮಿತ್ರನೆಂಬವನು ನನಗಾಗಿ ತಪಸ್ಸು ಮಾಡುತ್ತ ನನ್ನನ್ನು ತೊಂದರೆಪಡಿಸುತ್ತಿದ್ದಾನೆ. ನಾನು ಅವನಿಗೆ ವಶಳಾಗಲು ಸಾಧ್ಯವೇ ಇಲ್ಲ. ಅವನು ತಪಸ್ಸು ಬಿಡುವಂತೆ ಕಾಣುವುದೂ ಇಲ್ಲ. ನನ್ನ ಗತಿ ಏನಾಗುವುದೋ ಎಂದು ಹೆದರುತ್ತಿದ್ದೇನೆ."

ಅವಳ ಮಾತು ಕೇಳಿ ಹರಿಶ್ಚಂದ್ರನು, "ಅದಕ್ಕಾಗಿ ನೀನು ಅಳುವುದನ್ನು ನಿಲ್ಲಿಸು. ನಿನ್ನನ್ನು ತಪಸ್ಸಿನಿಂದ ಆಕರ್ಷಿಸಿ ನೋಯಿಸಿಕೊಂಡಿರುವ ಆ ವಿಶ್ವಾಮಿತ್ರನಿಂದ ತಪಸ್ಸನ್ನು ನಿಲ್ಲಿಸುತ್ತೇನೆ. ಚಿಂತೆಬಿಡು" ಎಂದು ಅವಳಿಗೆ ಮಾತುಕೊಟ್ಟು, ಹರಿಶ್ಚಂದ್ರನು ವಿಶ್ವಾಮಿತ್ರನ ಆಶ್ರಮಕ್ಕೆ ಹೋಗಿ ಅವನೊಂದಿಗೆ,



"ಅಯ್ಯಾ ಮಹಾಮುನೀ! ಸುಮ್ಮನೆ ತಪಸ್ಸು ಮಾಡಿ ದೇಹ ಪೀಡನೆಗೆ ಗುರಿಯಾಗುವ ಅಗತ್ಯವೇನಿದೆ? ನಾನು ರಾಜ್ಯಪಾಲನೆ ಮಾಡುವಾಗ ಪಾಪಬುದ್ಧಿಯಿಂದ ಲೋಕಪೀಡನೆಯಾಗುವಂತಹ ತಪಸ್ಸು ಮಾಡಲು ಸಾಧ್ಯವಿಲ್ಲ. ಒಳ್ಳೆಯದರಲ್ಲಿ ಹೇಳುತ್ತೇನೆ. ಭೂದೇವಿಯನ್ನು ನೋಯಿಸುವಂತಹ ಈ ಕೆಲಸ ಬಿಡು. ಇದರಲ್ಲಿ ಪುಣ್ಯವೂ ಇಲ್ಲ, ಪುರುಷಾರ್ಥವೂ ಇಲ್ಲ" ಎಂದನು.

ವಿಶ್ವಾಮಿತ್ರನು ಹರಿಶ್ಚಂದ್ರನಿಗೆ ಯಾವ ಪ್ರತ್ಯುತ್ತರವನ್ನೂ ಹೇಳದೆ, ಆಶ್ರಮವನ್ನು ಬಿಟ್ಟು ಮತ್ತೆಲ್ಲಿಗೋ ಹೊರಟುಹೋದನು. ಅದುವರೆಗೆ ವಸಿಷ್ಠನ ಮೇಲೆ ರುಷ್ಟನಾಗಿದ್ದ ವಿಶ್ವಾಮಿತ್ರನು ಈಗ ಹರಿಶ್ಚಂದ್ರನು ತನ್ನ ತಪಸ್ಸನ್ನು ಹಳಿಯುವುದನ್ನು ಕೇಳಿ, ಇನ್ನಷ್ಟು ಕೋಪಗೊಂಡನು. ಹರಿಶ್ಚಂದ್ರನನ್ನು ಮೋಸದಿಂದಲೇ ಗೆಲ್ಲಬೇಕೆಂಬ ನಿಶ್ಚಯಕ್ಕೆ ಬಂದು ವಿಶ್ವಾಮಿತ್ರನು, ಒಬ್ಬ ರಾಕ್ಷಸನನ್ನು ವಶಪಡಿಸಿಕೊಂಡು, ಅವನಿಗೊಂದು ಕೆಲಸವನ್ನು ಒಪ್ಪಿಸಿದನು. ಆ ರಾಕ್ಷಸನು ಹಂದಿಯ ರೂಪತಾಳಿ ಹರಿಶ್ಚಂದ್ರನ ಉಪವನದೊಳಗೆ ನುಗ್ಗಿ, ಭಟರನ್ನು ಹೆದರಿಸಿ ಓಡಿಸಿ, ಹೂಗಿಡ ಬಳ್ಳಿಗಳನ್ನು ನಾಶಮಾಡತೊಡಗಿದನು.

ಹೂಮಾಲೆ ಕಟ್ಟುವವರು, ಆ ಹಂದಿಯ ಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಿದರೂ ಅದಕ್ಕೇನೂ ಆಗಲಿಲ್ಲ. ಅದು ಸಾಧಾರಣ ಹಂದಿಯಲ್ಲವೆಂದುಕೊಂಡು ಅವರು ಓಡಿ ಹೋಗಿ ರಾಜನೊಂದಿಗೆ ಮೊರೆಯಿಟ್ಟುಕೊಂಡರು.

ಹರಿಶ್ಚಂದ್ರನು ಕುದುರೆಯ ಮೇಲೇರಿ ಕೆಲವು ಸೈನಿಕರನ್ನು ಹಿಂದಿಟ್ಟುಕೊಂಡು ಉಪವನಕ್ಕೆ ಬಂದನು. ದೂರದಲ್ಲಿ ಗುರುಗುಟ್ಟಿಕೊಂಡಿದ್ದ ಹಂದಿಯನ್ನೂ, ಅದು ಧ್ವಂಸಮಾಡಿದ ಹೂವಿನ ಗಿಡಗಳನ್ನೂ ನೋಡಿ, ಮಹಾಕೋಪದಿಂದ ಅದರ ಮೇಲೆ ಬಾಣಗಳನ್ನು ಪ್ರಯೋಗಿಸಿದನು. ಅದು ಥಕ್ಕನೆ ಮಾಯವಾಗುತ್ತ, ಮತ್ತೆ ಕಾಣಿಸುತ್ತ ಹರಿಶ್ಚಂದ್ರನನ್ನು ನಾನಾ ರೀತಿಯಾಗಿ ಓಡಾಡಿಸಿ ದಣಿಸಿತು. ಕಡೆಗೆ ಆ ಹಂದಿ ಅರಣ್ಯಕ್ಕೆ ಓಡುವುದನ್ನು ನೋಡಿ, ಹರಿಶ್ಚಂದ್ರನೂ ಅದರ ಬೆಂಬತ್ತಿದನು.

ಹಂದಿಯೂ ಅದರ ಹಿಂದೆ ಹರಿಶ್ಚಂದ್ರನೂ ಓಡುತ್ತಿರಲು ರಭಸವಾಹಿನಿಯಾದೊಂದು ಕಾಡುತೊರೆ ಅಡ್ಡಬಂದಿತು. ಹರಿಶ್ಚಂದ್ರನು ಕುದುರೆಯಿಂದ ಇಳಿದು ಅದಕ್ಕೆ ನೀರು ಕುಡಿಸಿ, ತಾನೂ ನೀರು ಕುಡಿದು, ಹಿಂದಿರುಗಿ ಹೋಗಲು ಯಾವ ದಾರಿಯೋ ಎಂದು ಆಲೋಚಿಸಿಕೊಂಡು ನಿಂತನು. ಹಾಳು ಹಂದಿಯಂತೂ ಇನ್ನು ಸಿಗುವ ಹಾಗಿಲ್ಲವೆಂದು ಗೊತ್ತಾಗಿ ಬೇಸರವಾಯಿತು.

ಆಗ ವಿಶ್ವಾಮಿತ್ರನು ವೃದ್ಧ ಬ್ರಾಹ್ಮಣನ ವೇಷದಲ್ಲಿ ಅವನ ಬಳಿಗೆ ಬಂದು, ಹರಿಶ್ಚಂದ್ರನ ನಮಸ್ಕಾರವನ್ನು ಸ್ವೀಕರಿಸಿ ಹರಸಿ, "ನೀನು ರಾಜನಲ್ಲವೇ?



ಈ ನಿರ್ಜನ ಪ್ರದೇಶಕ್ಕೆ ಒಬ್ಬಂಟಿಗನಾಗಿ ಏತಕ್ಕೆ ಬಂದೆ ?" ಎಂದು ಕೇಳಿದನು.

ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ಹಂದಿಯ ಸಂಗತಿಯನ್ನೆಲ್ಲಾ ಹೇಳಿ, "ಈಗ ಹಿಂದಿರುಗಿ ಹೋಗುವ ದಾರಿ ಹೇಗೋ ತಿಳಿಯಲಿಲ್ಲ. ಯಾವ ದಿಕ್ಕಿಗೆ ಹೋಗಬೇಕೋ ನಿಮಗೆ ಗೊತ್ತಿದ್ದರೆ ದಯವಿಟ್ಟು ತಿಳಿಸಬೇಕು" ಎಂದನು.

ಅದಕ್ಕೆ ವಿಶ್ವಾಮಿತ್ರನು, "ರಾಜಾ, ಇದೊಂದು ಪುಣ್ಯತೀರ್ಥ. ಇಲ್ಲಿಗೆ ಬಂದ ಮೇಲೆ ಪಿತೃದೇವತೆಗಳಿಗೆ ತರ್ಪಣಕೊಟ್ಟು ಶಕ್ತಿಗೆ ತಕ್ಕ ಹಾಗೆ ದಾನಧರ್ಮಗಳನ್ನೂ ಮಾಡಬೇಕು. ನೀನು ಕೊಡುವ ದಾನ ತೆಗೆದುಕೊಳ್ಳಲಿಕ್ಕಾಗಿಯೇ ನಾನು ಬಂದೆನು. ನೀನು ನಿನಗೆ ತೋರಿದ್ದನ್ನು ದಾನ ಕೊಡುವೆಯಾದರೆ, ನಾನು ನಿನ್ನ ಹಿಂದೆ ಸ್ವಲ್ಪ ದೂರದವರೆಗೆ ಬಂದು ನಿನಗೆ ರಾಜಧಾನಿಗೆ ಹೋಗುವ ದಾರಿ ತೋರಿಸುತ್ತೇನೆ" ಎಂದನು.

ಅದನ್ನು ಕೇಳಿ ಹರಿಶ್ಚಂದ್ರನು ಹೀಗೆಂದನು: "ಸ್ವಾಮಿ, ನೀವು ಏನು ಕೇಳುವಿರೋ ಅದನ್ನೇ ದಾನ ಮಾಡುತ್ತೇನೆ. ನಿಮಗೆ ಏನು ಬೇಕು ? ಬಂಗಾರವೆ ? ಕುದುರೆಗಳೆ ? ಧನವೆ ? ಭೂಖಂಡವೆ ? ನಾನು ಈ ಮೊದಲು ರಾಜಸೂಯವನ್ನು ಮಾಡಿದಾಗ ಮುನಿಗಳ ಸಮಕ್ಷಮದಲ್ಲಿ ಯಾರು ಏನನ್ನು ಕೇಳಿದರೂ ಇಲ್ಲವೆನ್ನದೆ ಕೊಡುವೆನೆಂದು ದೀಕ್ಷೆ ಹಿಡಿದವನು. ನೀವು ತೇಜಸ್ವಿಗಳಾಗಿ ಮಹಾಪುರುಷರಂತೆ ಕಾಣುವಿರಿ. ಈ ತೀರ್ಥವೋ ಪವಿತ್ರವಾದುದು. ನಿಮಗೆ ಇಷ್ಟವಾದುದನ್ನು ನಿಃಶಂಕೆಯಿಂದ ಕೇಳಿರಿ. ತಪ್ಪದೆ ಕೊಡುತ್ತೇನೆ."

"ರಾಜಾ, ನೀನು ಅಷ್ಟು ದೊಡ್ಡವನಲ್ಲದಿದ್ದರೆ ಹೀಗೆ ಹೇಳಲಾರೆ. ನೀನು ಯಾರೆಂದು ನನಗೆ ಗೊತ್ತಿದೆ. ಸೂರ್ಯ ವಂಶದ ತ್ರಿಶಂಕುವಿನ ಮಗನಾಗಿ ಹುಟ್ಟಿದ ನಿನ್ನನ್ನು ಕುರಿತು ವಸಿಷ್ಠನು ತುಂಬಾ ಶ್ಲಾಘಿಸಿ ಹೇಳುವುದನ್ನು ಕೇಳಿದ್ದೇನೆ. ಅವನು ಎಂದಿಗೂ ಸುಳ್ಳಾಡುವವನಲ್ಲ. ನೀನು ಮಹಾದಾತನು. ಭೂಮಂಡಲದ ರಾಜನು. ಈಗ ನನ್ನ ಮಗನಿಗೆ ನೀನು ಮದುವೆ ಮಾಡಿಸಬೇಕು. ಆಮೇಲೆ ಮದುವೆಯ ಅಂಗವಾಗಿ ದಾನ ಕೇಳಲು ಬರುತ್ತೇನೆ" ಎಂದು ಹೇಳಿ ವಿಶ್ವಾಮಿತ್ರನು ಅತ್ತ ತಿರುಗಿ "ಹೀಗೆ ಬನ್ನಿ" ಎಂದು ಕರೆದನು.

ಕೂಡಲೇ ವಿಶ್ವಾಮಿತ್ರನು ಮಾಯದಿಂದ ಸೃಷ್ಟಿಸಿದ ಯುವಕನೂ ಹತ್ತು ವಯಸ್ಸಿನ ಕನ್ಯೆಯೂ ಅಲ್ಲಿಗೆ ಬಂದರು. "ಇವರೇ ಮದುವೆಯಾಗಬೇಕಾದ ವಧೂವರರು. ಇವರಿಗೆ ನಿನ್ನ ಹೆಸರಿನಲ್ಲಿ ನಾನು ಮದುವೆ ಮಾಡುತ್ತೇನೆ. ಅದರಿಂದ ನಿನಗೆ ರಾಜಸೂಯ ಯಾಗ ಮಾಡಿದುದಕ್ಕಿಂತಲೂ ಹೆಚ್ಚಿನ ಪುಣ್ಯವಿದೆ" ಎಂದನು.

ಹರಿಶ್ಚಂದ್ರನು ಹಾಗೆಯೇ ಆಗಲೆಂದು ಒಪ್ಪಿದನು. ಆಮೇಲೆ ವೃದ್ಧ ಬ್ರಾಹ್ಮಣ ರೂಪದ ವಿಶ್ವಾಮಿತ್ರನು

ನಗರಕ್ಕೆ ಹೋಗುವ ದಾರಿಯನ್ನು ತೋರಿಸಿ, ತಾನು ಮದುವೆಯ ಏರ್ಪಾಡುಗಳನ್ನು ಮಾಡಿ, ದಾನ ಪಡೆಯಲು ಅರಮನೆಗೆ ಬರುತ್ತೇನೆಂದು ಹೇಳಿ ತನ್ನ ಆಶ್ರಮಕ್ಕೆ ಹೋದನು.

ಮಾರನೇ ದಿನ ವಿಶ್ವಾಮಿತ್ರನು ಹರಿಶ್ಚಂದ್ರನ ಅರಮನೆಗೆ ಹೋದಾಗ ಹರಿಶ್ಚಂದ್ರನು ಅಗ್ನಿಗೃಹದಲ್ಲಿ ಸಂಧ್ಯಾವಂದನಾ ನಂತರದ ಅಗ್ನಿಕಾರ್ಯದಲ್ಲಿ ನಿರತನಾಗಿದ್ದನು,

ನಾನು ಸರಿಯಾದ ಸಮಯಕ್ಕೇ ಬಂದಿದ್ದೇನೆ. ದಾನ ಕೊಡಲೂ ಪಡೆಯಲೂ ಅಗ್ನಿಸಾಕ್ಷಿ ಪ್ರಜ್ವಲಿಸಿಕೊಂಡಿರುವ ಈ ಸಮಯವೇ ಒಳ್ಳೆಯದು. ನನಗೆ ಬೇಕಾದ ದಾನವನ್ನು ಕೇಳುತ್ತೇನೆ. ಕೊಟ್ಟು ಕೃತಾರ್ಥನಾಗು " ಎಂದನು ವಿಶ್ವಾಮಿತ್ರ.



" ರಾಜಾ, ನಿನ್ನ ಇದಿರಿನಲ್ಲಿರುವ ಈ ಅಗ್ನಿಯ ಸಾಕ್ಷಿಯಾಗಿ ನಿನ್ನ ಸಂಪೂರ್ಣ ರಾಜ್ಯವನ್ನು ಆನೆ ಕುದುರೆ ಮೊದಲಾದ ಸಮಸ್ತ ಸಂಪತ್ತುಗಳೊಂದಿಗೆ ನನಗೆ ದಾನ ಕೊಡು " ಎಂದನು ವಿಶ್ವಾಮಿತ್ರ.

ಹರಿಶ್ಚಂದ್ರನು ಹಿಂದು ಮುಂದು ಆಲೋಚನೆ ಮಾಡದೆ, " ಇದೋ ಕೊಟ್ಟೆನು " ಎಂದು ಮಂತ್ರೋಚ್ಚಾರ ಪೂರ್ವಕವಾಗಿ ಅದೆಲ್ಲವನ್ನೂ ದಾನವಾಗಿ ಕೊಟ್ಟನು.

ಆಗ ವಿಶ್ವಾಮಿತ್ರನು, " ರಾಜಾ, ದಕ್ಷಿಣೆಯಿಲ್ಲದ ದಾನವು ವ್ಯರ್ಥ. ಆದುದರಿಂದ ಈ ದಾನಕ್ಕೆ ತಕ್ಕ ದ್ರವ್ಯದ ದಕ್ಷಿಣೆ ಕೂಡಾ ಕೊಟ್ಟು ದಾನದ ಫಲವನ್ನು ಪಡೆ " ಎಂದನು.

" ಆ ದಕ್ಷಿಣೆ ಎಷ್ಟಿದ್ದೀತು ? " ಎಂದು ಹರಿಶ್ಚಂದ್ರನು ಪ್ರಶ್ನಿಸಿದನು.

" ಈ ದಾನಕ್ಕೆ ಸರಿಹೋಗುವ ದಕ್ಷಿಣೆ ಎರಡು ಖಂಡಿ ಬಂಗಾರ." ಎಂದನು ವಿಶ್ವಾಮಿತ್ರ. "ಆಗಲಿ ಕೊಡುತ್ತೇನೆ "ಎಂದು ಹರಿಶ್ಚಂದ್ರನು ಮಾತು ಕೊಟ್ಟನು. ವಿಶ್ವಾಮಿತ್ರನ ಕಪಟದ ಭಾರವು ಹರಿಶ್ಚಂದ್ರನನ್ನು ಆಶ್ಚರ್ಯಬೆರೆತ ಆಲೋಚನೆಗೆ ತಳ್ಳಿತು. ದಾನದೊಂದಿಗೆ ದಕ್ಷಿಣೆ ಕೊಡಬೇಕಾದುದು ನ್ಯಾಯವೂ ಸಹಜವೂ ಎಂತಲೇ ಅವನು ಹಿಂದು ಮುಂದು ಯೋಚಿಸದೆ ಕೊಡುವೆನೆಂದು ಒಪ್ಪಿದನು. ಇರುವುದನ್ನೆಲ್ಲಾ ದಾನ ಮಾಡಿದ ಮೇಲೆ ಎರಡು ಖಂಡಿ ಬಂಗಾರವನ್ನು ಎಲ್ಲಿಂದ ಕೊಡಲು ಸಾಧ್ಯ ? ವಿಶ್ವಾಮಿತ್ರನಂತಹ ತಪಸ್ವಿ ಕಾಲ ವೈಪರೀತ್ಯದಿಂದಲೇ ಧನಲೋಭಕ್ಕೆ ಒಳಗಾಗಿ ಹೀಗೆ ಮೋಸ ಮಾಡಲು ನೋಡುತ್ತಾನೆ ! ಕಾಲದ ಸೂತ್ರಧಾರಿಣಿಯಾದ ಮಹಾದೇವಿಯನ್ನು ಹರಿಶ್ಚಂದ್ರನಂತೂ ನೆನೆಯಲಿಲ್ಲ. ವಿಶ್ವಾಮಿತ್ರನು ದಾಂಭಿಕ ವಿನಯದಿಂದ ಅವಳ ದಿವ್ಯಮಂತ್ರ ಉಪದೇಶಿಸಿದನೇ ಹೊರತು, ತನ್ನ ರಾಜಸವನ್ನು ಬಿಡಲಿಲ್ಲ. ಅದಕ್ಕೆಂದೇ ಹೀಗೆಲ್ಲಾ ಆಡಿಸುತ್ತಿದ್ದಾಳೆ.

ದಕ್ಷಿಣೆಗೆ ನಾಳೆ ಬರುತ್ತೇನೆಂದು ಹೇಳಿ, ವಿಶ್ವಾಮಿತ್ರನು ಹೊರಟು ಹೋದನು. ಚಿಂತೆಯಲ್ಲಿರುವ



ರಾಜನನ್ನು ನೋಡಿ ರಾಣಿ, ಕಾರಣ ಕೇಳಿದಳು. ಹರಿಶ್ಚಂದ್ರನು ದಾನ ದಕ್ಷಿಣೆಗಳ ಸಮಾಚಾರ ಹೇಳಿ ಊಟವಿಲ್ಲದೆಯೇ ಆ ದಿನವನ್ನು ಕಳೆದನು. ಬೆಳಗಾಗುತ್ತಲೇ ವಿಶ್ವಾಮಿತ್ರನು ಬಂದು, "ರಾಜನೇ, ಇನ್ನೂ ಇಲ್ಲೇ ಇರುವೆಯಾ? ರಾಜ್ಯವನ್ನು ಬಿಟ್ಟು ಎತ್ತಾದರೂ ಹೋಗು. ನನಗೆ ಕೊಡುವೆನೆಂದ ದಕ್ಷಿಣೆ ಮಾತ್ರ ಬೇಗನೇ ಕೊಡು" ಎಂದನು.

"ಹೊರಟು ಹೋಗುತ್ತೇನೆ. ಎಲ್ಲವನ್ನೂ ಕೊಟ್ಟು ಬಿಟ್ಟೆನಾದುದರಿಂದ ದಕ್ಷಿಣೆಗೆ ಸ್ವಲ್ಪಕಾಲ ತಾಳಿಕೊಳ್ಳಿ" ಎಂದು ಹರಿಶ್ಚಂದ್ರನು ತನ್ನ ಹೆಂಡತಿಯನ್ನೂ, ಮಗನನ್ನೂ ಕರೆದುಕೊಂಡು ಹೊರಟನು.

ಅವರು ಮೂವರೂ ಉಟ್ಟ ಬಟ್ಟೆಯೊಂದಿಗೆ ಹೊರಟಿದ್ದರು. ರಾಜನ ಪರಿಸ್ಥಿತಿಯನ್ನು ನೋಡಿ ಪುರಜನರು ಕಣ್ಣೀರು ತುಂಬಿ ಮನಸ್ಸಿನಲ್ಲಿ ವೃದ್ಧ ಬ್ರಾಹ್ಮನನ್ನು ಬೈದುಕೊಂಡರು.

ಹೋಗುತ್ತಿರುವ ಹರಿಶ್ಚಂದ್ರನ ಹಿಂದೆಯೇ ಹೋಗುತ್ತ ವಿಶ್ವಾಮಿತ್ರನು, "ನನ್ನ ದಕ್ಷಿಣೆ ಬೇಗನೇ ಕೊಡುವುದು ಒಳ್ಳೆಯದು. ಇಷ್ಟವಿಲ್ಲದಿದ್ದರೆ ಕೊಡಲಾರೆನೆಂದು ಹೇಳಿಬಿಡು. ನಾನು ಮತ್ತೆ ಕೇಳಲಾರೆ. ಅಷ್ಟೇ ಅಲ್ಲ, ಬೇಕಾದರೆ ನೀನು ದಾನ ಕೊಟ್ಟುದನ್ನೆಲ್ಲಾ ನಿನಗೇ ತಿರುಗಿ ಕೊಡುತ್ತೇನೆ. ಮಾತು ಉಳಿಸಿಕೊಳ್ಳುವೆಯಾದರೆ ದಕ್ಷಿಣೆಯ ಬಂಗಾರ ಕೊಡಲೇಬೇಕು" ಎಂದನು.

"ಅಯ್ಯಾ, ನಿಮ್ಮ ಋಣವನ್ನು ತಪ್ಪದೆ ಕೊಟ್ಟು ತೀರಿಸುತ್ತೇನೆ. ಅದನ್ನು ತೀರಿಸದೆ ಅನ್ನವನ್ನು ಹೇಗೆ ತಿನ್ನಲಿ? ನನ್ನನ್ನು ನೋಡಿ ಎಲ್ಲರೂ ನೆಗಾಡಲಾರರೆ? ಸ್ವಲ್ಪ ವ್ಯವಧಿ ಕೊಡಿ. ದೈವಾನುಕೂಲವಾಗಿ ನನಗೆ ಧನವು ದೊರಕಿದ ಕೂಡಲೇ ನಿಮ್ಮ ದಕ್ಷಿಣೆ ಕೊಟ್ಟುಬಿಡುತ್ತೇನೆ. ಸಿಕ್ಕಿದಷ್ಟು ನೀವೇ ತೆಗೆದುಕೊಂಡು ದಕ್ಷಿಣೆಯ ಲೆಕ್ಕ ಇಟ್ಟುಕೊಳ್ಳಿ" ಎಂದನು ಹರಿಶ್ಚಂದ್ರ.

ಅದಕ್ಕೆ ವಿಶ್ವಾಮಿತ್ರನು, "ರಾಜಾ, ಹುಚ್ಚುಚ್ಚಾಗಿ ಮಾತಾಡಬೇಡ. ನಿನಗೆ ಧನವು ಎಲ್ಲಿ ಸಿಗುತ್ತದೆ? ಸಮಸ್ತ ಧನಕ್ಕೂ ಮೂಲವಾದ ರಾಜ್ಯವು ಈಗ ನನ್ನದು. ಹೀಗೆ ಅಂಕುಡೊಂಕಾಗಿ ಸುಳ್ಳಾಡದೆ ಕೊಡಲಾಗುವುದಿಲ್ಲವೆಂದು ಹೇಳಿಬಿಡು. ನಾನು ಮತ್ತೆ ನಿನ್ನನ್ನು ಕೇಳಲಾರೆ. ಆ ಮೇಲೆ ನಿನ್ನಿಷ್ಟ" ಎಂದನು.

"ನಾನು ಸುಳ್ಳೇಕೆ ಹೇಳಲಿ? ಹಣಕ್ಕಾಗಿ ಇಷ್ಟು ಸಂದೇಹವೇತಕ್ಕೆ? ನನ್ನ ಶರೀರವನ್ನು ಮಾರಿಯಾದರೂ ನಿಮ್ಮ ಬಂಗಾರ ಕೊಡುತ್ತೇನೆ. ನನ್ನನ್ನು ಪೀಡಿಸಬೇಕಾಗಿಲ್ಲ. ಆರೋಗ್ಯವಂತರಾಗಿ ನಾವು ಮೂವರಿದ್ದೇವೆ. ನಮ್ಮನ್ನು ಕೊಂಡುಕೊಳ್ಳುವವರಿರುವರೋ ಎಂದು ನೀವೇ ನೋಡಿ ಹೇಳಿರಿ. ಈ ಅಯೋಧ್ಯೆಯಲ್ಲಿ ಯಾರೂ ಇಲ್ಲದಿದ್ದರೆ ಕಾಶಿಯಲ್ಲಾದರೂ ನಮ್ಮನ್ನು ಮಾರಿಕೊಂಡು ನಿಮ್ಮ

ದಕ್ಷಿಣೆ ಕೊಡುತ್ತೇನೆ. ಒಂದು ತಿಂಗಳು ತಾಳಿರಿ" ಎಂದು ಹರಿಶ್ಚಂದ್ರನು ಮುಂದಕ್ಕೆ ನಡೆದನು.

ಅವರು ಕಾಶಿಗೆ ಹೋದರು. ಗಂಗಾ ಸ್ನಾನಮಾಡಿ, ತರ್ಪಣ ಬಿಟ್ಟ ಮೇಲೆ ಹರಿಶ್ಚಂದ್ರನು ತಮ್ಮೊಂದಿಗೆ ಬ್ರಾಹ್ಮಣ ರೂಪದಲ್ಲಿ ಬಂದ ವಿಶ್ವಾಮಿತ್ರನೊಂದಿಗೆ, "ನಾವು ಮೂವರಲ್ಲಿ ಯಾರನ್ನಾದರೂ ಮಾರಿ ನಿಮ್ಮ ಋಣ ತೀರಿಸುತ್ತೇನೆ" ಎಂದು ಹೊರಡುವಾಗ, ವಿಶ್ವಾಮಿತ್ರನು, "ಇದು ನ್ಯಾಯವೇ ? ಒಂದು ತಿಂಗಳಿಂದ ನಿಮ್ಮ ಹಿಂದೆ ನನ್ನನ್ನು ತಿರುಗಿಸಿದ್ದಾಯಿತು. ಇನ್ನೂ ತಿರುಗಲು ಹೇಳುವಿಯಾ ?" ಎಂದನು.

"ತಿಂಗಳು ತುಂಬಲು ಸಂಜೆಯವರೆಗೂ ಹೊತ್ತಿದೆ. ಅಷ್ಟರವರೆಗೆ ತಾಳಿರಿ" ಎಂದನು ಹರಿಶ್ಚಂದ್ರ. "ಈಗ ಹೋಗಿ ಮತ್ತೆ ಇಲ್ಲಿಗೇ ಬರುತ್ತೇನೆ, ಆಗ ಕೊಡದಿದ್ದರೆ ಶಪಿಸುತ್ತೇನೆ" ಎಂದು ವಿಶ್ವಾಮಿತ್ರನು ಹೊರಟು ಹೋದನು.

ಸಾಯಂಕಾಲದೊಳಗೆ ಎರಡು ಖಂಡಿ ಬಂಗಾರ ಕೊಡದಿದ್ದರೆ ಬ್ರಾಹ್ಮಣ ಶಾಪಕ್ಕೆ ಒಳಗಾಗ ಬೇಕಾಗುತ್ತದೆ. ಹರಿಶ್ಚಂದ್ರನಿಗೆ ಏನೂ ತೋರದಾಯಿತು. ಕೇಳಿದರೆ ಕೂಡಲೇ ಕೊಡುವ ಮಿತ್ರರಲ್ಲಿ ಕೂಡಾ ಕೈ ಜಾಚದ ಹರಿಶ್ಚಂದ್ರನಿಗೆ ಈಗ ಯಾವ ಮಿತ್ರರೂ ಸಹಾ ಇಲ್ಲ. ಬ್ರಾಹ್ಮಣನೊಬ್ಬನ ಋಣವನ್ನು ತೀರಿಸಲಾಗದೆ ತಾನು ಸತ್ತು ಹೋದರೆ. ಬ್ರಾಹ್ಮಣನ ಧನವನ್ನು ಅಪಹರಿಸಿದ ತಪ್ಪಿಗೆ ನರಕದಲ್ಲಿ ಹುಳುವಾಗಿ ಹುಟ್ಟಬೇಕು. ಆದುದರಿಂದ ತಾನು ತನ್ನನ್ನು ಮಾರಿಕೊಳ್ಳದೆ ಬೇರೆ ಗತಿ ಇಲ್ಲ.

ಗಂಡನ ಚಿಂತೆಯ ಮುಖವನ್ನು ನೋಡಿ, ಹೆಂಡತಿ ಶೈಬ್ಯ, "ಪ್ರಭೂ, ಸತ್ಯವಂತನಿಗಿಂತ ಹೆಚ್ಚಿನವರು ಯಾರೂ ಇರಲಾರರು. ಮಾತು ತಪ್ಪಿದವನು ಪಿಶಾಚಿಗೆ ಸಮಾನನು. ಯಯಾತಿರಾಜನು ನೂರು ಅಶ್ವಮೇಧಗಳನ್ನು ಮಾಡಿ, ಆ ಮೇಲೆ ರಾಜಸೂಯವನ್ನು ನೆರವೇರಿಸಿ ಅದರ ಫಲಿತವಾಗಿ ಸ್ವರ್ಗಕ್ಕೆ ಹೋಗಿ ಒಂದು ಸುಳ್ಳು ಹೇಳಿದ ಕಾರಣಕ್ಕಾಗಿ ಅಧೋಗತಿಗೆ ಬಿದ್ದನಂತೆ" ಎಂದಳು.

ಅವಳ ಮಾತು ಕೇಳಿ ಹರಿಶ್ಚಂದ್ರನು "ನೀನು ಏನೋ ಹೇಳಬೇಕೆಂದಿರುವಿ. ಧೈರ್ಯದಿಂದ ಹೇಳಿಬಿಡು" ಎಂದನು. ಅದಕ್ಕೆ ಶೈಬ್ಯಳು, "ಪತ್ನಿ ಎಂಬವಳು ಸಂತಾನಕ್ಕಾಗಿ ಬೇಕು. ನನ್ನಿಂದ ನಿಮಗೆ ಆ ಫಲ ಸಿಕ್ಕಿಯಾಗಿದೆ. ಈಗ ನನ್ನನ್ನು ಯಾರಿಗಾದರೂ ಮಾರಿ ಆ ಬ್ರಾಹ್ಮಣನ ಋಣ ತೀರಿಸಬಹುದಲ್ಲ ?" ಎಂದಳು.

ಅವಳ ಮಾತು ಕೇಳಿ ಹರಿಶ್ಚಂದ್ರನಿಗೆ ದುಃಖ ಉಕ್ಕಿತು. ತುಂಬ ಪ್ರಿಯಳಾಗಿ ಮಾತಾಡಿ ತನ್ನನ್ನು ಆನಂದಪಡಿಸುವ ಹೆಂಡತಿ, ಇಂತಹ ಕಠೋರವಾದ ಮಾತು ಹೇಳುವುದನ್ನು ಕೇಳ ಬೇಕಾಯಿತು. ದುಃಖಾವೇಗದಲ್ಲಿ ಹರಿಶ್ಚಂದ್ರನಿಗೆ ಸ್ಮೃಹೆ ತಪ್ಪಿತು.





# ಪ್ರಾಯಶ್ಚಿತ್ತ

ಒಂದಾನೊಂದು ಕಾಲದಲ್ಲಿ ಕೈರೋ ನಗರದೊಳಗೆ ಇಪ್ಪತ್ತು ವಯಸ್ಸಿನ ಒಬ್ಬ ಯುವಕನು ದೊಡ್ಡ ಸರಾಫನೆಂದು ಹೆಸರು ಪಡೆದಿದ್ದನು. ಅವನ ಅಂಗಡಿಯಲ್ಲಿ ಯಾರಿಗೆ ಯಾವ ನಗಗಳು ಬೇಕಾದರೂ ಸಿಗುತ್ತಿದ್ದುವು. ನಗಗಳನ್ನು ಕೊಳ್ಳಲು ಅವನ ಅಂಗಡಿಗೆ ಹೆಚ್ಚಾಗಿ ಹೆಂಗುಸರೇ ಬರುತ್ತಿದ್ದರು. ಅವನಿಗೆ ಒಳ್ಳೆಯ ವ್ಯಾಪಾರ ನಡೆಯುತ್ತಿದ್ದರೂ, ತಾನು ಯಾವ ಹೆಂಗುಸಿನ ಬಲೆಗೂ ಬೀಳದಂತೆ ಎಚ್ಚರಿಕೆ ವಹಿಸುತ್ತಿದ್ದ ಆ ಯುವಕನು, ಯಾವಳನ್ನೂ ಕಣ್ಣೆತ್ತಿ ನೋಡುತ್ತಿದ್ದಿಲ್ಲ. ಅವನ ಪ್ರವರ್ತನೆಯನ್ನು ನೋಡಿ ಎಲ್ಲರೂ ಮೆಚ್ಚಿಕೊಳ್ಳುತ್ತಿದ್ದರು.

ಹೀಗಿರುವಾಗ ಒಂದು ದಿನ ಅವನ ಅಂಗಡಿಗೆ ಒಬ್ಬಳು ನೀಗ್ರೋ ಗುಲಾಮ ಹುಡುಗಿ ಬಂದು, "ಎಲ್ಲಾ ತರದ ನಗಗಳೂ ಇಲ್ಲಿ ಇವೆಯೆಂದರು. ಈ ಅಂಗಡಿಯ ಯಜಮಾನರು ನೀವೇನಾ?" ಎಂದು ಕೇಳಿದಳು.

ಹೌದೆಂದ ಮೇಲೆ ಆ ಹುಡುಗಿ ಅತ್ತಿತ್ತ ನೋಡಿ ಆ ಯುವಕನ ಕೈಗೆ ಒಂದು ಚೀಟನ್ನು ಕೊಟ್ಟಳು. ಆ ಚೀಟನ್ನು ಬಿಡಿಸಿ ನೋಡಿದ ಅಂಗಡಿಯವನಿಗೆ ಆಶ್ಚರ್ಯವಾಗಿ, ಅದರೊಂದಿಗೆ ಕೋಪವೂ ಉಕ್ಕಿತು. ಏಕೆಂದರೆ ಅದರಲ್ಲಿ ಒಂದು ಪ್ರೇಮಗೀತ ಬರೆಯಲ್ಪಟ್ಟಿತ್ತು. ಆ ಗೀತದ ಕಡೆಯ ಚರಣದಲ್ಲಿ ಅದನ್ನು ಬರೆದವಳ ಹೆಸರು ಕೂಡಾ ಬರೆಯಲಾಗಿತ್ತು.

ವರ್ತಕ ಯುವಕನು ಆ ಚೀಟಿಯನ್ನು ಪರ್ರನೆ ಹರಿದು ಹಾಕಿದನು. ಪ್ರತ್ಯುತ್ತರಕ್ಕಾಗಿ ನಿರೀಕ್ಷಿಸಿಕೊಂಡಿದ್ದ ಗುಲಾಮ ಹುಡುಗಿಯನ್ನು ಬಾಯಿಗೆ ಬಂದ ದುರ್ಭಾಷೆಗಳಿಂದ ಬೈದು ಅಂಗಡಿಯಿಂದ ಹೊರಗೆ ದೂಡಿಬಿಟ್ಟನು. ಅದನ್ನು ನೋಡಿದ ಸುತ್ತುಮುತ್ತಲಿನವರು "ಆಹಾ! ಎಷ್ಟು ನೀತಿವಂತ! ಭೇಷ್! ಭೇಷ್!" ಎಂದು ಆ ವರ್ತಕನನ್ನು ಹೊಗಳಿದರು.

ಆಮೇಲೆ ಎರಡು ಮೂರು ವರ್ಷಗಳು ಕಳೆದುವು. ಒಳ್ಳೆಯ ಕನ್ಯೆದೊರಕಿದ ಪಕ್ಷದಲ್ಲಿ ಮದುವೆಯಾಗಬೇಕೆಂದು ಆ ವರ್ತಕ ಯುವಕನಿಗೆ ತೋರತೊಡಗಿತು. ತನ್ನ ಅಂಗಡಿಗೆ ಬಂದು ಹೋಗುವ ಯುವತಿಯರಲ್ಲಿ ಸುಂದರಿಯೂ, ಬುದ್ಧಿವಂತೆಯೂ ಆದ ಕನ್ಯೆಯಿರುವರೋ ಎಂದು ಅವನು ನೋಡಲು ತೊಡಗಿದನು. ಒಂದು ದಿನ ಅವನ ಅಂಗಡಿಗೆ ಐವಾರು ಮಂದಿ

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



ಬಿಳೀ ಗುಲಾಮಿ ಹುಡುಗಿಯರನ್ನು ಕರೆದುಕೊಂಡು ಸುಂದರ ಯುವತಿಯೊಬ್ಬಳು ಬಂದು, "ಒಳ್ಳೆಯ ನಗಗಳು ಇವೆಯೇ ?" ಎಂದು ಮಧುರಕಂಠದಿಂದ ಪ್ರಶ್ನಿಸಿದಳು.

"ನಿಮಗೇನು ಬೇಕೋ ಅದೆಲ್ಲಾ ಇವೆ" ಎಂದನು ಯುವಕ ವರ್ತಕ. ಅವಳು ಪಾದಗಳಿಗೆ ಗೊಲುಸು ಬೇಕೆಂದಳು. ಒಬ್ಬ ಗುಲಾಮ ಹುಡುಗಿ ಅವಳ ಪರಿಕಾರದ ಅಂಚನ್ನು ಮೇಲೆತ್ತಿ ಪಾದಗಳನ್ನು ತೋರಿಸಿದಳು. ಅಷ್ಟೊಂದು ಸಣ್ಣ ಪಾದಗಳನ್ನು ನೋಡಿ ವರ್ತಕ ಯುವಕನು ಬೆರಗಾಗಿ, "ನನ್ನ ಹತ್ತಿರ ಇರುವ ಸಣ್ಣ ಪಾದಗೊಲುಸುಗಳು ಕೂಡಾ ಈ ಪಾದಗಳಿಗೆ ಸಡಿಲಾಗುತ್ತವೆ" ಎಂದನು.

"ಇದೇನು ? ನನ್ನದು ಆನೆಯ ಕಾಲು ಎನ್ನುವಿರಲ್ಲ ?" ಎಂದಳು ಯುವತಿ ಆಶ್ಚರ್ಯದಿಂದ. "ಯಾವನು ಹಾಗೆ ಹೇಳುವವನು ? ನಾಲಗೇಲಿ ಹುಳುಬಿದ್ದೀತು ! ಇವು ಸುಂದರ ಗುಬ್ಬಚ್ಚಿಗಳಂತಿವೆ ಪಾದಗಳು. ಪುಟ್ಟಪಾದ ! ಹೊಳೆಯುವ ಬಂಗಾರು ಪಾದ !" ಎಂದನು ವರ್ತಕ ಯುವಕ.

"ಹೋಗಲಿ, ಕೈಗಳಿಗೆ ಕಂಕಣಗಳಿದ್ದರೆ ನೋಡೋಣ" ಎಂದಳು ಸುಂದರಿ. ಗುಲಾಮ ಹುಡುಗಿಯೊಬ್ಬಳು ಅವಳ ಕೈಗಳ ಮೇಲಿನ ಬಟ್ಟೆಯನ್ನು ತೊಲಗಿಸಿದ ಕೂಡಲೇ ವರ್ತಕ ಯುವಕನು ಇನ್ನಷ್ಟು ಬೆರಗಾದನು.

"ನನ್ನ ಹತ್ತಿರ ಇರುವ ಕಂಕಣಗಳಲ್ಲಿ ಅತಿ ಚಿಕ್ಕದು ಕೂಡಾ ಈ ಕೈಗಳಿಗೆ ಸಡಿಲಾಗುತ್ತವೆ" ಎಂದನು.

"ಇದೊಳ್ಳೆ ಕತೆ ! ನನ್ನ ಬೆರಳುಗಳು ಬಾಳೇಕಾಯಿಗಳಂತಿವೆಯೆಂದೂ, ಕೈಗಳು ಆನೆಯ ಸೊಂಡಿಲಿನ ಹಾಗಿವೆಯೆಂದೂ ಹೇಳುತ್ತೀರಲ್ಲಾ !" ಎಂದಳು ಯುವತಿ.

"ಹಾಗೆಲ್ಲಾ ಹೇಳುವವರು ನಾಶವಾಗಿ ಹೋಗುತ್ತಾರೆ. ನಿಜ ಹೇಳಬೇಕೆಂದರೆ, ಸುಂದರೀ ! ನಿನ್ನಂಥ ಸೌಂದರ್ಯದ ರಾಶಿ ಮೂರು ಲೋಕಗಳಲ್ಲಿಯೂ ಇಲ್ಲ. ನನ್ನನ್ನು ಮದುವೆ ಮಾಡಿಕೊಂಡು ಧನ್ಯನಾಗಿಸುವೆಯಾ ?" ಎಂದು ಅಂಗಡಿಯ ಯುವಕ ಅವಳ ಮುಂದೆ ಮೊಣಕಾಲೂರಿ ದೀನನಂತೆ ಪ್ರಾರ್ಥಿಸಿದನು.

ಅವಳು ಮುಗುಳು ನಗು ನಕ್ಕಳು. "ನನ್ನ ಅಪ್ಪನಿಗೆ ನನ್ನ ಮೇಲೆ ಎಷ್ಟು ಕೋಪವೆಂಬುದು ನಿಮಗೆ ಗೊತ್ತಿಲ್ಲ. ನನ್ನ ಕೂದಲು ಒಣಹುಲ್ಲರಾಶಿಯಂತೆ, ವಿಕಾರವಾದ ಮುಖವಂತೆ. ಗೊಗ್ಗೆಹಲ್ಲುಗಳಂತೆ. ಮುಖ ತುಂಬ ಕರಿಕರಿ ಮಚ್ಚೆಗಳಂತೆ. ನನ್ನನ್ನು ಯಾರೂ ಮದುವೆಯಾಗಲಾರರಂತೆ. ನಾನು ಸುಂದರಿಯಾಗಿರುವೆನೆಂದು ನೀವು ಹೇಳುವುದನ್ನು ಕೇಳುವಾಗ ನನಗೆ ಆನಂದವಾಗುತ್ತದೆ" ಎಂದಳು.

"ನಿನ್ನ ಅಪ್ಪನಿಗೆ ಏನೋ ಹುಚ್ಚು ಹಿಡಿದಿರಬೇಕು. ಆತನ ಹೆಸರೇನೆಂದು ಹೇಳು. ನಾನು ಅವರ ಬಳಿಗೆ

ಹೋಗಿ ನಿನ್ನನ್ನು ಮದುವೆಯಾಗುವೆನೆಂದು ಪ್ರಮಾಣ ಮಾಡಿ ಹೇಳುತ್ತೇನೆ" ಎಂದನು ವರ್ತಕ ಯುವಕ.

"ಅವರ ಹೆಸರು ಷೇಕ್ ಅಲ್ ಇಸ್ಲಾಮ್, ಅವರು ಈ ನಗರದ ವರ್ತಕರೊಳಗೆ ಪ್ರಸಿದ್ಧರಾಗಿದ್ದಾರೆ. ನೀವು ನನ್ನನ್ನು ಮದುವೆಯಾಗುವೆನೆಂದು ಹೇಳಿದರೆ ಅವರು ಕೂಡಲೇ ಒಪ್ಪುವುದಿಲ್ಲ. ನನ್ನ ವಿಕಾರ ರೂಪವನ್ನು ವರ್ಣಿಸಿ ನಿಮ್ಮನ್ನು ಹೆದರಿಸಿಬಿಡುತ್ತಾರೆ. ಎಲ್ಲದಕ್ಕೂ ನೀವು ನನಗೆ ಒಪ್ಪಿಗೆ, ನನಗೆ ಒಪ್ಪಿಗೆ ಅನ್ನಬೇಕು; ಮರೀಬೇಡಿ" ಎಂದಳು ಆ ಯುವತಿ. "ನಾನು ಅವರನ್ನು ಯಾವಾಗ ಎಷ್ಟು ಗಂಟೆಗೆ ನೋಡಲಿ?" ಎಂದು ಕೇಳಿದನು ಯುವಕ.

"ನಾಳೆ ಬೆಳಿಗ್ಗೆ ಹತ್ತು ಗಂಟೆಗೆ" ಎಂದು ಹೇಳಿ ಆ ಯುವತಿ ತನ್ನ ಗುಲಾಮ ಜತೆಗಾತಿಯರೊಂದಿಗೆ ಹೊರಟು ಹೋಗಿಬಿಟ್ಟಳು.

ಯಾವಾಗ ಆ ದಿನ ಕಳೆದು ಬೆಳಗಾಗುತ್ತದೋ ಎಂದು ಹೊತ್ತು ಕಳೆದು, ಆ ಯುವಕ ವರ್ತಕನು ಮರುದಿನ ಬೆಳಿಗ್ಗೆ ಹತ್ತು ಗಂಟೆಗೆ, ಷೇಕ್ ಅಲ್ ಇಸ್ಲಾಮನ ಭವನವನ್ನು ಹುಡುಕಿಕೊಂಡು ಹೋಗಿ ಅವನನ್ನು ನೋಡಿದನು.

ಷೇಕ್ ಅಲ್ ಇಸ್ಲಾಮ್ ಯುವಕ ವರ್ತಕನ ಕೋರಿಕೆಯನ್ನು ಕೇಳಿ, ಸ್ವಲ್ಪ ವಿಚಾರಭಾರದ ಮುಖದಿಂದ, "ನಿನಗೆ ನನ್ನ ಕುಮಾರಿಯ ಸಂಗತಿ ಗೊತ್ತಿಲ್ಲವೆಂದು ಕಾಣುತ್ತದೆ. ಹುಡುಗಾ! ಅವಳೊಬ್ಬಳು ಅಭಾಗ್ಯವತಿ. ಹಗಲು ಅವಳನ್ನು ನೋಡಿದರೆ ರಾತ್ರಿ ಕನಸಿನಲ್ಲಿ ಬರುತ್ತಾಳೆ" ಎಂದು ತನ್ನ ಮಗಳ ಕುರೂಪವನ್ನು ಬಹಳ ಹೊತ್ತಿನವರೆಗೆ ವರ್ಣಿಸಿ ವರ್ಣಿಸಿ ಹೇಳಿದನು. ಅವನು ಹೇಳುವ ಪ್ರತಿಯೊಂದಕ್ಕೂ ವರ್ತಕ ಯುವಕನು, "ನನಗೆ ಒಪ್ಪಿಗೆಯೇ! ನನಗೆ ಆಗಬಹುದು! ಇರಲಿ ಏನೂ ಪರವಾಗಿಲ್ಲ" ಎಂದು ಹೇಳುತ್ತಾ ಬಂದನು.

ಎಲ್ಲಾ ಹೇಳಿ ಮುಗಿಸಿದ ಮೇಲೆ "ಹಾಗಾದರೆ ಸರಿ" ಎಂದು ಷೇಕ್ ಅಲ್ ಇಸ್ಲಾಮ್ ಅವನಿಗೆ ತನ್ನ ಕುಮಾರಿಯನ್ನು ಕೊಡಲು ಒಪ್ಪಿದನು. ಆಮೇಲೆ ಯುವಕನಿಂದ ಒಂದು ಒಪ್ಪಂದ ಪತ್ರವನ್ನು ಬರೆಯಿಸಿ





ಕಡು ಕುರೂಪಿ. ಈ ಮೊದಲು ಅಂಗಡಿಗೆ ಬಂದು ನಗಗಳ ಸಂಗತಿ ಕೇಳಿದ ಆ ಸುಂದರಿ ಇವಳು ಅಲ್ಲವೇ ಅಲ್ಲ. ಎಂತಹ ಮಾಯೆ !

ತನಗೆ ಇಷ್ಟೊಂದು ಘೋರ ಪರಿಸ್ಥಿತಿ ಏಕೆ ಬಂತೆಂದು ತಿಳಿಯದೆ ವರ್ತಕ ಯುವಕನು ಮೋರೆ ತಗ್ಗಿಸಿಕೊಂಡು ತನ್ನ ಮನೆಗೆ ಹಿಂದಿರುಗಿದನು. ಮರುದಿನ ಅವನು ತನ್ನ ಅಂಗಡಿಯಲ್ಲಿ ಕುಳಿತು ಕೊಂಡು ದೊಡ್ಡ ಚಿಂತೆಯಲ್ಲಿ ಮುಳುಗಿರುವಾಗ, ಮೊದಲು ಬಂದ ಸುಂದರ ಯುವತಿ, ತನ್ನ ಗುಲಾಮ ಜತೆಗಾತಿಯರೊಂದಿಗೆ ಬಂದು, "ಹೊಸ ಮದು ಮಗನಿಗೆ ಶುಭವಾಗಲಿ ! ಸೌಖ್ಯವಾಗಲಿ !" ಎಂದಳು ಮುಗುಳು ನಗುತ್ತ.

ಯುವಕನು ಅವಳನ್ನು ಜರೆದಾಡಲು ಪ್ರಾರಂಭಿಸಿದನು. ಆಗ ಅವಳು ಆಶ್ಚರ್ಯವನ್ನು ನಟಿಸುತ್ತ, "ಮೊದಲು ಒಂದು ದಿನ ನಾನು ನಿಮಗೊಂದು ಗೀತ ಬರೆದು ಕಳಿಸಿದ್ದೆ. ಅದನ್ನು ಒಬ್ಬಳು ನೀಗ್ರೋ ಹುಡುಗಿ ನಿಮಗೆ ತಂದು ಕೊಟ್ಟಿದ್ದಳು, ನೆನಪಿದೆಯೆ ?" ಎಂದಳು. ಅವನು ಅವಳ ಮುಖವನ್ನೇ ನೋಡುತ್ತಿರಲು, ಅವಳು ಹೊರಡಲು ಅಣಿಯಾದಳು. ತಟ್ಟನೆ ಯುವಕನು ಅವಳ ಕಾಲಿಗೆ ಬಿದ್ದು, "ನನಗೆ ಬುದ್ಧಿ ಬಂದಿತು. ನನ್ನನ್ನು ಹೇಗಾದರೂ ಈ ನರಕದಿಂದ ಹೊರಗೆ ಹಾಕು. ನಿನ್ನ ದಮ್ಮಯ್ಯ !" ಎಂದು ಬೇಡಿದನು.

ಅವಳು ಅವನನ್ನು ನೋಡಿ ಕನಿಕರಗೊಂಡು ಅವನಿಗೆ ಒಂದು ಉಪಾಯವನ್ನು ಹೇಳಿ ಹೊರಟು ಹೋದಳು. ಅವಳು ಹೇಳಿದ ಪ್ರಕಾರ ಅವನು ಕೆಲವು ಏರ್ಪಾಡುಗಳನ್ನು ಮಾಡಿ ಮುಗಿಸಿ, ನೇರವಾಗಿ ತನ್ನ ಹೊಸ ಮಾವಯ್ಯ, ಷೇಕ್ ಆಲ್ ಇಸ್ಲಾಮನ ಮನೆಗೆ ಹೋದನು. ಅಲ್ಲಿ ಹಜಾರದಲ್ಲಿ ಮಾವ ಅಳಿಯಂದಿರು ಸುಖಾಸೀನರಾದ ಮೇಲೆ ಏನೋ ಮಾತುಕತೆಗೆ ತೊಡಗಿದರು.

ಸಾಕ್ಷಿಗಳ ರುಜುಗಳನ್ನು ಹಾಕಿಸಿದನು. ವಧುವಿಗಿರುವ ಎಲ್ಲಾ ಕುರೂಪಗಳನ್ನು ತಿಳಿದು ಹೆಂಡತಿಯಾಗಿ ಸ್ವೀಕರಿಸುವೆನೆಂದೂ, ವಿವಾಹ ಸ್ಫೋಟ ಮಾಡಿಕೊಳ್ಳುವ ಪಕ್ಷಕ್ಕೆ ಇಪ್ಪತ್ತು ಸಾವಿರ ದಿನಾರಗಳಷ್ಟು ಚಿನ್ನವನ್ನು ಪರಿಹಾರವಾಗಿ ಕೊಡುವೆನೆಂದೂ ಪತ್ರದಲ್ಲಿ ಬರೆಯಿಸಿಕೊಂಡನು.

"ಮದುಮಗಳು ರೋಗಿಷ್ಠಳಾದುದರಿಂದ ಮಂಚವನ್ನಿಳಿದು ಬಾರಳು. ಆದುದರಿಂದ ಮದುವೆ ಇಲ್ಲಿಯೇ ಆಗಬೇಕು" ಎಂದನು ಷೇಕ್ ಆಲ್ ಇಸ್ಲಾಮ್. "ಬಹಳ ಒಳ್ಳೆಯದಾಯಿತು" ಎಂದನು ವರ್ತಕ ಯುವಕ. ಮದುವೆ ಕೂಡಲೇ ಆಯಿತು. ಮುಸುಗಿನ ಮದುಮಗಳೊಂದಿಗೆ ಮದುವೆ ಶಾಸ್ತ್ರ ಮುಗಿಯಿತು. ಆಮೇಲೆ ವರ್ತಕ ಯುವಕನು ತನ್ನ ಹೆಂಡತಿಯ ಕೋಣೆಯೊಳಗೆ ಹೋಗಿ ಅವಳ ಮುಖದ ಮೇಲಿನ ಮುಸುಗನ್ನು ತೊಲಗಿಸಿ ನೋಡಿದನು. ಅವನ ಎದೆ ನಿಂತು ಹೋಯಿತು. ಅವನ ಹೆಂಡತಿ

ಆಗ ಆ ಮನೆಯ ಬಾಗಿಲನ್ನು ದೂಡಿಕೊಂಡು, ಅನೇಕಾನೇಕ ಮಂದಿ ಕಾಕಪೋಕ ಜನರು ಹೀನಾ ಮಾನಾ ಕೇಕೇ ಹಾಕುತ್ತ ಒಳಕ್ಕೆ ಬಂದರು. ಕೆಲವರು ತಮಟೆ ಬಾರಿಸುತ್ತಿರಲು, ಕೆಲವರು ಹುಚ್ಚುಚ್ಚಾಗಿ ಸಿಳ್ಳು ಹಾಕಿದರು. ಕೆಲವರು ಗರಡಿ ಸಾಮು ಮಾಡು ತ್ತಿದ್ದರು. ಕೆಲವರು ಲಾಗ ಹಾಕಿ ಕುಣಿದರು. ಕೆಲವರು ಕೋತಿಗಳನ್ನೂ, ಕರಡಿಗಳನ್ನೂ ಆಡಿಸಿದರು.

ಷೇಕ್ ಆಲ್ ಇಸ್ಲಾಮ್ ಕೋಪದಿಂದೆದ್ದು ಕಿರುಚುತ್ತ, "ಛೀ ಛೀ ! ಏನಿದು ಗಲಾಟೆ ? ನಿಲ್ಲಿಸಿರಿ ! ನಡೀರತ್ತ !" ಎಂದ ಗರ್ಜಿಸಿದನು. ಆದರೆ ಆ ವರ್ತಕ ಯುವಕನು ನಿಲ್ಲಿಸುಲು ಹೇಳುವ ವರೆಗೂ ಅವರು ನಿಲ್ಲಿಸಲಿಲ್ಲ.

ಆಮೇಲೆ ಯುವಕನು ಷೇಕ್ ಆಲ್ ಇಸ್ಲಾಮ್ ನನ್ನು ನೋಡಿ, "ಮಾವಾ ! ಇವರನ್ನು ನೀವು ಹೀಗೆ ಅವಮಾನ ಮಾಡಿದ್ದು ಸರಿಯಲ್ಲ ! ಇವರೆಲ್ಲಾ ನನ್ನ ಬಂಧು ಬಳಗ ದಾಯಾದಿಗಳು ! ನಾನು ಇವರನ್ನು ಕರೆಯದೆಯೇ ಮದುವೆಯಾದುದನ್ನು ತಿಳಿದು ಸಂಭ್ರಮ ಮಾಡಲು ಬಂದಿದ್ದಾರೆ. ಅಷ್ಟೇ ಮತ್ತೇನಲ್ಲ" ಎಂದನು. ಷೇಕ್ ಆಲ್ ಇಸ್ಲಾಮ್ ಬೆಪ್ಪು ಬಡೆದವ ನಾಗಿ "ಅಯ್ಯೆರೇ ಅಲ್ಲಾ ! ಇವರೋ ನಿನ್ನ ಬಂಧು ಗಳು ! ಈ ಸಂಗತಿ ಮೊದಲೇ ತಿಳಿದಿದ್ದರೆ ನಾನು ನನ್ನ ಮಗಳನ್ನು ನಿನಗೆ ಕೊಡುತ್ತಿ ದ್ದಿಲ್ಲವಲ್ಲಾ !" ಎಂದನು ಗೋಳು ದನಿಯಿಂದ. "ನೀವು ಕೇಳುತ್ತಿದ್ದರೆ ನಾನು ಹೇಳುತ್ತಿದ್ದೆನಲ್ಲಾ !" ಎಂದನು ಯುವಕ.

"ಕೇಳದಿದ್ದರೂ ನೀನು ಹೇಳಬೇಕಿತ್ತು. ಆದ್ದರಿಂದ ನೀನು ಬರೆದುಕೊಟ್ಟ ಪತ್ರ ನಡೆಯದು. ನಾನು ಒಪ್ಪಲಾರೆ !" ಎಂದ ಷೇಕ್ ಆಲ್ ಇಸ್ಲಾಮ್.

"ನಾನು ನನ್ನ ಹೆಂಡತಿಯನ್ನು ಸತ್ತರೂ ಬಿಡಲಾರೆ ! ನೀವೇನು ಮಾಡುವಿರೋ ಮಾಡಿ ನೋಡುತ್ತೇನೆ !" ಎಂದನು ಯುವಕ ಕೋಪ ತೋರಿಸುತ್ತ.

ಷೇಕ್ ಇಸ್ಲಾಂ ಅವನ ಕಾಲಿಗೆ ಬೀಳುವವನ ಹಾಗೆ, "ಅಪ್ಪಾ, ನನ್ನ ಮರ್ಯಾದೆ ಉಳಿಸು. ಅಲ್ಲಾ ನಿನ್ನನ್ನು ಕಾಪಾಡಲಿ ! ನನ್ನ ಮಗಳಿಗೆ ಸೋಡಚೀಟು ಕೊಡಪ್ಪಾ ! ನಿನ್ನ ಬಂಧುಗಳು ನನ್ನ ಮನೆಗೆ ಬರುವುದನ್ನು ನಾನು ಎಷ್ಟು ಮಾತ್ರಕ್ಕೂ ಸಹಿಸಲಾರೆ ನಪ್ಪಾ" ಎಂದನು.

ಒತ್ತಾಯದಿಂದ ಕೊಡುವವನಂತೆ ಯುವಕನು ತನ್ನ ಕುರೂಪಿ ಹೆಂಡತಿಗೆ ಸೋಡಚೀಟಿ ಬರೆದು ಕೊಟ್ಟು ಅಲ್ಲಿಂದ ಹೊರ ಬಿದ್ದನು. ಆಮೇಲೆ ತಾನು ಪ್ರೇಮಿಸಿದ ಆ ಸುಂದರಿಯನ್ನು ಮದುವೆಯಾದನು. ಅವಳು ಕೈರೋ ಸುಲ್ತಾನನ ಸಮೀಪ ಬಂಧುವಿನ ಮಗಳೆಂದು ತಿಳಿದು ಅವನ ಸಂತೋಷಕ್ಕೆ ಮೇರೆ ಇಲ್ಲದೇ ಹೋಯಿತು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೮೧ ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**



I. Uma Rani





K. Sitharam

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಡಿಸೆಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಅಕ್ಟೋಬರ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಗೋಳಗಳೆಲ್ಲಾ ಹೀಗೇ ಸುತ್ತುತ್ತೆ!**

ಎರಡನೇ ಫೋಟೋ: **ಭೂಗೋಳದಿ ನಮ್ ದೇಶವು ಕಾಣುತ್ತೆ!**

ಕಳುಹಿಸಿದವರು: ಪಿ. ಜಿ. ರಾವ್

ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು-೯.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# ಕಣ್ಣುಗಳನ್ನು ಮುಚ್ಚಿ ನಿಮಗೇನು ಬೇಕೆಂದು ನಿರ್ಧರಿಸಿ.



ಉಳಿತಾಯ ಮಾಡಿದರೆ ಬಯಕೆಗಳು ಈಡೇರುತ್ತವೆ. ಒಂದು ಸೈಕಲ್ಲೇ? ಒಂದು ಗೊಂಬೆಗಳ ಮನೆಯೋ? ಹೊಸ ಆಟದ ಸಾಮಾನೇ? ನಿಮ್ಮ ಹಣದಿಂದಲೇ ಖರೀದಿಸಬಹುದು. ಕೆನರಾ ಬ್ಯಾಂಕಿನ **ಬಾಲಕ್ಷೇಮ** ಠೇವಣಿ ಯೋಜನೆ ನಿಮಗಾಗಿ ಇದೆ. ಬೀಗದ ಕೈಯುಳ್ಳ ಸುಂದರವಾದ **ಬಾಲಕ್ಷೇಮ** ಉಳಿತಾಯ ಪೆಟ್ಟಿಗೆಯಲ್ಲಿ ನಾಣ್ಯಗಳ ಮೇಲೆ ನಾಣ್ಯಗಳನ್ನು ಶೇಖರಿಸಿ. ಪೆಟ್ಟಿಗೆ ತುಂಬಿದೊಡನೆ ಕೆನರಾ ಬ್ಯಾಂಕಿನಲ್ಲಿ ಜಮಾ ಮಾಡಿ ನಾಣ್ಯ ಸಂಗ್ರಹಣೆ ಪುನರಾರಂಭಿಸಿ. ನಾವೂ ಅದಕ್ಕೆ ಸೇರಿಸುವ ಕಾರಣ ನಿಮ್ಮ ಹಣ ಬೆಳೆಯುತ್ತದೆ. ಕೂಡಲೇ, ನಿಮಗೆ ಬೇಕಾದ್ದನ್ನು ಕೊಳ್ಳುವಷ್ಟು ದೊಡ್ಡದಾಗುತ್ತದೆ.

ನಿಮ್ಮ ಬಯಕೆ ಈಡೇರಲು ಎಂತಹ ಚಮತ್ಕಾರ! ಉಳಿತಾಯದ ಪಾಠಕ್ಕೆ ಎಂತಹ ಅದ್ಭುತ ಮಾರ್ಗ!

ಹೆಚ್ಚಿನ ವಿವರಗಳಿಗೆ ನಿಮ್ಮ ಸಮೀಪದ ಕೆನರಾ ಬ್ಯಾಂಕ್ ಶಾಖೆಗೆ ಭೇಟಿ ನೀಡಿ. ಕಾಮಧೇನು, ವಿದ್ಯಾನಿಧಿ ಮತ್ತು ನಿರಂತರ ನಮ್ಮ ಇತರ ವಿಶೇಷ ಯೋಜನೆಗಳು.

**ಬಾಲಕ್ಷೇಮ ಠೇವಣಿ ಯೋಜನೆ**




**ಕೆನರಾ ಬ್ಯಾಂಕ್**




(ಒಂದು ರಾಷ್ಟ್ರೀಕೃತ ಬ್ಯಾಂಕ್)
(ರಾಷ್ಟ್ರದಾದ್ಯಂತ)
1,200 ಕ್ಕೂ ಹೆಚ್ಚು ಶಾಖೆಗಳು

# ರಾಮು ಮತ್ತು ಶ್ಯಾಮು

## ಮೋಸಗಾರರಿಗೆ ಶಾಸ್ತಿ


























